# ಸುಕನ್ಯಾ ಚರಿತ್ರೆ

ಕೆ. ರಾಮಸ್ವಾಮ್ಯೈಯ್ಯಂಗಾರ್, ಆಸ್ಥಾನ ವಿದ್ವಾನ್.

ಪ್ರಕಾಶಕರು:—

ಪಿ. ಎ. ಪೈ ಬ್ರದರ್ಸ್, ಉಡುಪಿ.

ತೃತೀಯ ಮುದ್ರಣ.

1927.

*All Rights Reserved.*

ಬೆಲೆ: ಆಣೆ ೫.

# ವಿಮರ್ಶೆ.



ಸಾವಿತ್ರಿ ಸುಕನ್ಯೆ ಇವರಿಬ್ಬರೂ ಪತಿವ್ರತಾ ಸ್ತ್ರೀಯರಲ್ಲಿ ಅಗ್ರಗಣ್ಯೆಯರು. ಇವರಿಬ್ಬರ ಚರಿತ್ರೆಗಳೂ ಅದ್ವಿತೀಯವಾದವುಗಳು. ಆದರೂ ಇವರ ಗುಣಗಳಲ್ಲಿ ಸ್ವಲ್ಪ ಮಟ್ಟಿಗೆ ವ್ಯತ್ಯಾಸವಿರುವುದು. ಇವರಿಬ್ಬರೂ ರೂಪಯೌವನಸಂಪನ್ನೆಯರಾದ ರಾಜಪುತ್ರಿಯರು. ಇವರಲ್ಲಿ ಸಾವಿತ್ರಿಯು ತಾನೊಪ್ಪಿದ ಪುರುಷನನ್ನೇ ವರಿಸಬೇಕೆಂದು ಹಟಹಿಡಿದಳು; ನಾರದ ಮುನಿಯೂ ತಂದೆ ತಾಯಿಗಳೂ ಅಲ್ಪಾಯುವಾದ ಆ ಪತಿಯನ್ನು ವರಿಸಬೇಡವೆಂದು ಹೇಳಿದರೂ, ಅವರ ಮಾತುಗಳನ್ನು ಅವಳು ಕೇಳಲಿಲ್ಲ. ಹುಡುಗಿಯ ಇಷ್ಟಕ್ಕೆ ವಿರೋಧವಿಲ್ಲದಂತೆ ಅವರು ಸತ್ಯವಾನನಿಗೆನೇ ಆಕೆಯನ್ನು ಕೊಟ್ಟು ಮದುವೆ ಮಾಡಿದರು. ಇವಳು ರಾಜ್ಯಭ್ರಷ್ಟರಾಗಿದ್ದ ಅತ್ತೆಮಾವಂದಿರನ್ನೂ ಪತಿಯನ್ನೂ ಸೇವಿಸಿಕೊಂಡು ಕಾಡಿನಲ್ಲಿ ವಾಸವಾಗಿದ್ದಳು; ಹಲವು ಕಷ್ಟಗಳನ್ನು ಸಹಿಸಿದಳು. ಪತಿಯ ಮರಣಕ್ಕೆ ಮೂರು ದಿನ ಮುಂಚಿನಿಂದಲೂ ಉಪೋಷ್ಯವ್ರತವನ್ನು ಆಚರಿಸಿ, ದೇವರ ಪ್ರಾರ್ಥನೆಯಲ್ಲಿದ್ದು, ಗಂಡನನ್ನಗಲದೆ ಕಾದಿದ್ದಳು. ಆತನ ಹಿಂದೆಯೇ ಕಾಡಿಗೆ ಹೋಗಿ, ಯಮನು ಪತಿಯ ಪ್ರಾಣವನ್ನು ಕೊಂಡೊಯ್ಯುವಾಗ ಅವನನ್ನು ವಿನಯದ ಮಾತುಗಳಿಂದ ಬೇಡಿಕೊಂಡು, ಆತನ ಜೀವವನ್ನು ಉಳಿಸಿ ದೀರ್ಘಾಯುವನ್ನಾಗಿ ಮಾಡಿಕೊಂಡಳು; ಅತ್ತೆ ಮಾವಂದಿರಿಗೆ ರಾಜ್ಯ ಸಿಕ್ಕುವಂತೆಯೂ ತನ್ನ ತಂದೆಗೆ ಗಂಡು ಮಕ್ಕಳಾಗುವಂತೆಯೂ ವರವನ್ನು ಪಡೆದು ಆಚಂದ್ರಾರ್ಕವಾದ ಕೀರ್ತಿಯನ್ನು ಸಂಪಾದಿಸಿಕೊಂಡಳು.

ಸುಕನ್ಯೆಯ ಚರಿತ್ರೆಯು ಬೇರೆ ವಿಧವಾಗಿದೆ. ರಾಜಕುಮಾರಿಯಾಗಿದ್ದ ಈಕೆಯು ಬಂಧುಜನರೊಂದಿಗೆ ಉದ್ಯಾನವನಕ್ಕೆ ಹೋಗಿದ್ದಾಗ, ತಪಸ್ಸು ಮಾಡಿಕೊಂಡು ಅಂತರ್ಮುಖಿಯಾಗಿದ್ದ ಚ್ಯವನಮಹರ್ಷಿಯ ಮೈಮೇಲೆ ಬೆಳೆದಿದ್ದ ಹುತ್ತದಲ್ಲಿ, ಹೊಳೆಯುತ್ತಿದ್ದ ಆತನ ಕಣ್ಣುಗಳನ್ನು ಚಾಪಲ್ಯದಿಂದ ಚುಚ್ಚಿಬಿಟ್ಟಳು! ಅದರಿಂದ ರಕ್ತಪ್ರವಾಹ ಹರಿಯುತ್ತಿದ್ದುದನ್ನು ನೋಡಿ ಅಲ್ಲಿಂದ ಓಡಿ ಬಂದಳು. ಆ ಋಷಿಯ ತಪಃಪ್ರಭಾವದಿಂದ ಅಲ್ಲಿ ಹೋಗಿದ್ದವರಿಗೆಲ್ಲರಿಗೂ ಜಲಮಲಗಳು ಕಟ್ಟಿಹೋದವು. ಸುಕನ್ಯೆಯ ತಂದೆಯಾದ ಶರ್ಯಾತಿರಾಯನು, ತಪಸ್ಸು ಮಾಡುತ್ತಿದ್ದ ಆ ಮಹರ್ಷಿಯ ಬಳಿಗೆ ಹೋಗಿ ಬೇಡಿಕೊಂಡನು. ತನ್ನ ಕಣ್ಣುಗಳು ಹೋಗಿ ಕುರುಡನಾದ್ದರಿಂದ ತನ್ನ ಸೇವೆಗಾಗಿ ಸುಕನ್ಯೆಯನ್ನು ಕೊಟ್ಟು ಮದುವೆಮಾಡಿದ ಹೊರತು ಪ್ರಸನ್ನನಾಗಲಾರೆನೆಂದು ಋಷಿಯು ಹೇಳಿಬಿಟ್ಟನು! ರಾಜನ ಮನಸ್ಸಿಗೆ ಇದು ಒಪ್ಪಲಿಲ್ಲ; ರಾಣಿಯರೂ ಸಮ್ಮ

ತಿಸಲಿಲ್ಲ. ಆದರೂ ಧೀರೆಯಾದ ಸುಕನ್ಯೆಯು ತನ್ನ ಅಪರಾಧಕ್ಕಾಗಿಯೂ ಲೋಕೋಪದ್ರವ ಶಾಂತಿಗಾಗಿಯೂ ಕುರುಡನಾಗಿರುವ ಚ್ಯವನ ಮಹರ್ಷಿಯನ್ನೇ ಮದುವೆಯಾಗುವೆನೆಂದಳು. ಅದರಂತೆ ಮದುವೆಯಾಯಿತು. ಸುಕನ್ಯೆಯು ತಾನು ರಾಜಕುಮಾರಿಯೆಂಬ ಗರ್ವವನ್ನುಳಿದು, ಕಾಡಿಗೆ ಹೋಗಿ ಪತಿ ಸೇವೆಯನ್ನು ಮಾಡಿಕೊಂಡು, ಆತನಿಗೆ ಯಾವ ಕೊರತೆಯೂ ಇಲ್ಲದಂತೆ ಕಾಪಾಡಿಕೊಂಡಿದ್ದಳು. ದೇವವೈದ್ಯರಾದ ಅಶ್ವಿನೀ ದೇವತೆಗಳು ಇವಳ ಪಾತಿವ್ರತ್ಯವನ್ನು ಕೆಡಿಸಲಿಕ್ಕೆ ಯತ್ನಿಸಿದರೂ ಸಾಧ್ಯವಾಗದೆ ಕಡೆಗೆ ಇವಳ ಉಜ್ವಲವಾದ ಪಾತಿವ್ರತ್ಯದ ತೇಜಸ್ಸಿಗೆ ಮೆಚ್ಚಿ, ಇವಳ ಪತಿಗೆ ಕಣ್ಣುಗಳನ್ನು ಕೊಟ್ಟು ಆರೋಗ್ಯವಂತನನ್ನಾಗಿ ಮಾಡಿದರು. ಸುಕನ್ಯೆಯು ತನ್ನ ಪತಿಯೊಂದಿಗೆ ಅನೇಕ ಸತ್ಕಾರ್ಯಗಳನ್ನು ಮಾಡುತ್ತ ಇಷ್ಟಭೋಗಗಳನ್ನನುಭವಿಸಿಕೊಂಡು ಸುಖವಾಗಿದ್ದುದಲ್ಲದೆ, ತನ್ನ ತಂದೆಯಿಂದ ಯಾಗವನ್ನು ಮಾಡಿಸಿ, ಆತನಿಗೆ ಗಂಡು ಮಕ್ಕಳಾಗುವಂತೆಯೂ, ತನ್ನ ಗಂಡನಿಗೆ ಉಪಕಾರ ಮಾಡಿದ ದೇವವೈದ್ಯರಿಗೆ ಯಜ್ಞಭಾಗ ಸಿಕ್ಕುವಂತೆಯೂ ಮಾಡಿದಳು. ಇಂಥ ಭಾರತ ರಮಣಿಯರ ಸಚ್ಚರಿತ್ರೆಯು ನಮ್ಮ ದೇಶಕ್ಕೆ ಭೂಷಣವಾಗಿದೆಯಲ್ಲವೆ? ಈಗಲೂ ಅನೇಕರು ಪ್ರಾತಃಕಾಲದಲ್ಲಿ ಇವರ ನಾಮಸ್ಮರಣವನ್ನು ಮಾಡುತ್ತಾರೆ.

ಈ ಚರಿತ್ರೆಯನ್ನು ನಾನು 30 ವರ್ಷಗಳ ಹಿಂದೆ ಬರೆದೆನು. ಕಾರವಾರದ ವಿನೋದಿನೀ ಪತ್ರಿಕೆಯಲ್ಲಿ ಇದು ಮೊದಲು ಪ್ರಕಟಿತವಾಯಿತು. ಆಮೇಲೆ ಈಚೆಗೆ ಎರಡು ಸಾರಿ ಮುದ್ರಿಸಲ್ಪಟ್ಟರೂ, ವಿದ್ಯಾ ಇಲಾಖೆಯವರ ಉದಾರಾಶ್ರಯದಿಂದಲೂ ಕನ್ನಡಿಗರ ಅಭಿಮಾನದಿಂದಲೂ ಮೂರನೆಯ ಮುದ್ರಣವಾಗ ಬೇಕಾಯಿತು. ಈಗ ಇದನ್ನು ಪುನಃ ಮುದ್ರಿಸುವ ಕಾರ್ಯವು ಮಹನೀಯರಾದ ಶ್ರೀಯುತ ಪಿ. ಎ. ಪೈ. ಬ್ರದರ್ಸ್‌ರವರಿಗೆ ಒಪ್ಪಿಸಲ್ಪಟ್ಟಿದೆ. ಈ ಮುದ್ರಣದಲ್ಲಿ ಕ್ಲಿಷ್ಟಾರ್ಥಗಳ ವಿವರಣೆಯೂ ಕಠಿಣ ಶಬ್ದಗಳ ಟಿಪ್ಪಣಿಯೂ ಕೊಡಲ್ಪಟ್ಟಿರುವುದರಿಂದ ಇದು ಮೊದಲಿಗಿಂತ ಹೆಚ್ಚಾಗಿ ವಿದ್ಯಾರ್ಥಿಗಳಿಗೆ ಸಹಾಯಕವಾಗಬಹುದೆಂದು ನಂಬಿದ್ದೇನೆ.

ಮಾಗಡಿ,
ಮಕರಸಂಕ್ರಾಂತಿ
ಕ್ರೋಧನ॥

ಆಸ್ಥಾನವಿದ್ವಾನ್,
**ರಾಮಸ್ವಾಮ್ಯಯ್ಯಂಗಾರ್.**

# ಸುಕನ್ಯಾ ಚರಿತ್ರೆ.

## ಭಾಮಿನಿ ಷಟ್ಪದಿ.

ಸಿರಿಯರಸ, ಕರುಣಾಳು, ನರಹರಿ
ದುರಿತದೂರ, ಸುರೇಶ ವಂದಿತ,
ಪರಮಪಾವನ ಮೂರ್ತಿ, ಪಂಕಜನಾಭ, ಪರವಸ್ತು[1] ।
ಗರುಡ ಗಮನ, ಗಜೇಂದ್ರವರದನೆ
ಶರಣಜನ ಸುರಧೇನು, ಕಂಸಾ-
ಸುರಮಥನ, ಕೈವಲ್ಯದಾಯಕ, ಸಲಹುಕೃಪೆಯಿಂದ ॥ ೧ ॥

ವಾಣಿ[2], ಕಮಲಜರಾಣಿ, ಪಂಕಜ-
ಪಾಣಿ, ನತಗೀರ್ವಾಣಿ, ಸುಗುಣ-
ಶ್ರೇಣಿ, ಸುಕಲಾವಿಪಣಿ, ನಮಿತ ಮೃಡಾಣಿ ಸುಶ್ರೋಣಿ ।
ಜಾಣತನದಾ ತಾಣಮೆನಿಸಿದೆ
ವಾಣಿಯಲಿ ನೆಲಸಿರ್ದು ಪೇಳಿಸು
ಕೇಣವಿಲ್ಲದೆ ಕವಿತೆಯನು ನೀಂ ಭುಜಗ ಸಮವೇಣೀ ॥ ೨ ॥

ಉದಯಕಾಲದೊಳೆದ್ದು ಪಠಿಸಲು
ಹದಿಬದೆಯ ನಾಮವನು ಪಾತಕ
ಬೆದರಿ ಪೋದಪುದೆನುತ ಮಾರ್ಯರು ಪೇಳ್ದಿಹರು. ಮುನ್ನ ।
ಮುದದಿ ನೆನೆಯುತ ಲವದಿರನು ನಾಂ

---

1 ಪರವಸ್ತು-ಶ್ರೇಷ್ಠವಾದ ಆತ್ಮ.

2 ವಾಣಿ-ಸರಸ್ವತಿ; ನತಗೀರ್ವಾಣಿ-ದೇವತೆಗಳಿಂದ ನಮಸ್ಕರಿಸಲ್ಪಟ್ಟವಳು; ಸುಕಲಾವಿಪಣಿ-ವಿದ್ಯೆಗೆ ಅಂಗಡಿ.

ಸದುಹೃದಯನಾ ಚ್ಯವನ ಮುನಿಪನ
ಸುದತಿಯಿತಿಹಾಸವನು ಪೇಳಲು ಯತ್ನಿಸಿದೆನೀಗ ॥ ೩ ॥
ಆ ಮಹಾಭಾರತದಿ ಮುನಿಪತಿ
ಲೋಮಶನು ಪೇಳ್ದಿರ್ಪ ಸದ್ಗುಣ-
[1]ಧಾಮೆಯೆನಿಪ ಸುಕನೆ ಚರಿತೆಯ ಕನ್ನಡಿಪೆನೀಗ ।
ಪ್ರೇಮದಿಂ ಸಜ್ಜನರು ಲಾಲಿಸಿ
ತಾಮಸನ ತಾವುಳಿದು ಗುಣವನೆ
[2]ಸೌಮನಸ್ಯದಿ ಮೆಚ್ಚಿ ಮನ್ನಿಪುದೆನುತ ಬೇಡುವೆನು ॥ ೪ ॥
ಧರೆಯೊಳುತ್ತಮವೆನಿಸಿ ಮೆರೆವೀ
ಭರತವರುಷದಿ ಜಗು[3]ನೆ ತಡಿಯೊಳ
ಗಿರುತಿಹುದು ಕುರುಕುಲದ ರಾಜನಿವಾಸವೆಂದೆನಿಸಿ ।
ಮೆರೆವ ಹಸ್ತಿನ ನಗರಿಯಲ್ಲಿಯೆ
ಕುರುವರರು ಜೂಜಿನೊಳು ಸೋಲಿಸೆ
ತರುಣಿ ಕೃ[4]ಷ್ಣಾ ಧರ್ಮಜಾದ್ಯರಿಗಾಯ್ತು ವನವಾಸ ॥ ೫ ॥
ಬನದೊಳಿರೆ ಲೋಮಶನು ಕುಂತೀ
ತನಯನಿಗೆ ಬೆಸಸಿದನು ಕಥೆಯನು,
ಸನುಮತದಿ ಸುಗುಣಾಢ್ಯೆಯೆನಿಪ ಸುಕನ್ನೆ ಚರಿತೆಯನು ।
[5]ಇನನ ವಂಶದಿ ಪೆಸರ ಪಡೆದಾ
ಜನಪತಿಯು ಶರ್ಯಾತಿಯಾತನ
ವನಿತೆಯರು ತಾವಿಹರು ನಾಲ್ಸಾಸಿರವು ಲೆಕ್ಕಿಸಲು ॥ ೬ ॥
ಹ[6]ರೆಯದಲಿ ಸೊ[7]ಬಗಿನಲಿ ಗುಣದಲಿ
ವರ ವಿಭವದಲಿ ಮಿಗಿಲು ಮಿಗಿಲೆಂ
ದೊರೆವ ತೆರದೊಳಗಿರ್ಪರಾ ರಾಣಿಯರ ಮೇಳದಲಿ ।

---

1 ಮನೆ 2 ಒಳ್ಳೇಮನಸ್ಸಿನಿಂದ 3 ಯಮುನೆ 4 ದ್ರೌಪದಿ 5 ಸೂರ್ಯನ 6 ಪ್ರಾಯದಲ್ಲಿ 7 ಸೊಗಸಿನಲ್ಲಿ

ಬೆರೆದು ಸೊಗದಿಂ[1]ದಿರ್ಪನಿತರವ
ಮರೆದು ವಿಷಯಾಸಕ್ತನಾಗಿಯೆ
ನರಪನಿಹದೊಳು ಸಿಲುಕದವರಾರ್ವಿಷಯಸುಖಗಳಲಿ? ॥ ೭ ॥
ಇನಿಬರರಸಿಯರಿರ್ದು ಮಾತಗೆ
ತನುಜರಿಲ್ಲದಕೊರತೆ ದೋರಿತು
ಘನತರದ ಸಂಸೃತಿ[2]ಯೊಳಿರ್ಪುದು ಚಿಂತೆಯೆಂತಿರ್ದುಂ. |
ಮನದಬೇಸರದಿಂ ವ್ರತಂಗಳ
ವಿನುತದಾನಂಗಳನು ಧರ್ಮವ
ನನುದಿನದಿ ಮಾಡುತ್ತಲಿರ್ದನು ಪುತ್ರಕಾಂಕ್ಷೆ[3]ಯಲಿ ॥ ೮ ॥
ಸಿರಿವರನು ಕರುಣಿಸಿದನಾತಂ-
ಗುರುಚೆಲುವ ಕನ್ನೆಯನು ಸತಿಯರ
ನೆರವಿ[4]ಯೊಳು ಮನ್ನೆ[5]ಯಳೆನಿಪ್ಪಳಿಗೊಲವಿನಿಂ ಬಳಿಕ ।
ನರಪತಿಯು ಮವನರಸಿಯರು ಮತಿ
ಭರದಿ ಸಂತಸಗೊಂಡು ಕುವರಿಗೆ
ಪರಮತೋಷದಿ ಪೆಸರಿಸಿದರು "ಸುಕನ್ಯೆ" ಯಿವಳೆನುತ ॥ ೯ ॥
ಬೆಳೆದುದಾಶಿಶು ಬಾಲಚಂದ್ರನ
ಕಳೆಯುವೊಲು ದಿನದಿನದಿ ಪೆರ್ಚುತೆ
ಕೆಳದಿ[6]ಯರ್ಕಳೊಳಾಡುತಂ ನಲಿಸುತ್ತೆ ತಾಯ್ವಿರನು.|
ಲಲನೆಯರು ಮಚ್ಚಿ[7]ಯೊಳು ಕನ್ನೆಯ
ಸಲಹಿದರು ತೋಷ[8]ದಲಿ ಮಚ್ಚರ[9]
ಮುಳಿದು ತಮ್ಮಯ ಪೊಡೆ[10]ಯೊಳುದಿಸಿದ ಕುವರಿಯಂದದಲಿ ॥೧೦॥

---

1 ಸುಖದಿಂದ. 2 ಸಂಸಾರದಲ್ಲಿ. 3 ಮಕ್ಕಳಾಗಬೇಕೆಂಬ ಆಶೆ. 4 ಸಮೂಹದಲ್ಲಿ.
5 ಪೂಜ್ಯಳು. 6 ಸಂಗಾತಿ. 7 ಪ್ರೀತಿ. 8 ಸಂತೋಷ, 9 ಮತ್ಸರ, 10 ಹೊಟ್ಟೆಯಲ್ಲಿ.

ಬಾಲದೊಡಿಗೆಯು ತೊಡಿಸಿ ನಲಿವರು;
ಲೀಲೆಗಳ ಮೆಚ್ಚುತ್ತ ಪೊಗಳುವ
ರಾಲಲಿತ ವಚನಗಳ ಕೇಳಿಯೆ ಮನದಿ ಹಿಗ್ಗುವರು; |
ಬಾಲೆ ಕಣ್ಮರೆಯಾಗೆ ನಿಮಿಷವು
ತಾಳಲಾರದೆ ಬೆದಕುತಿರ್ಪರು
ಪೇಳಲೇನಾತಂದೆ ತಾಯ್ಗಳ ಮೋಹದತಿಶಯವ ॥ ೧೧ ॥
ಆಡುವಳು ಸಖಿಯರೊಳು; ದೇವನ
ಪಾಡುವಳು ಮನವೊಲಿದು; ಸಂತತ
ಬೇಡುವಳು ಮಾತೆಯರ ನೀತಿಯನುಸರಿರೆಂದೆನುತ; |
ನೀಡುವಳು ಭಿಕ್ಷೆಯನು ದೀನರಿ-
ಗೋಡುವಳು ಪಾತಕಕೆ ಬೆದರುತೆ;
ನಾಡೆರೆಯ[1] ಶರ್ಯಾತಿಯಣುಗಿ ಸುಕನ್ಯೆ ಬಾಲ್ಯದಲಿ ॥ ೧೨ ॥
ಹೊತ್ತಿನಂತೆಯೆ ಎದ್ದು ಕೈಯನು
ಮತ್ತೆ ಕಾಲ್ಗಳ ಮೊಗವ ತೊಳೆಯುತ,
ಉತ್ತಮರಿಗೆರಗುತ್ತ ವಿದ್ಯೆಯನಭ್ಯಸಿಸಿ ಮುದದಿ, |
ಹೊತ್ತು ಮೀರದೆ ಭುಜಿಸಿ, ಸಖಿಯರ
ಮೊತ್ತಮಂ ಸಂತವಿಸಿ, ಸೊಗಮಾ
ಳುತ್ತಿಹಳುಮಾ ರಾಜಕನ್ಯೆ, ಸುಕನ್ಯೆ, ಗುಣಮಾನ್ಯೆ. ॥ ೧೩ ॥
ತಂದೆ ತಾಯ್ಗಳ ಮಾತ ಮೀರದೆ
ನಿಂದಿಸದೆಯನ್ಯರನು, ದೀನರ
ಕಂದಿಸದೆ ಪುಸಿಮಾತನಾಡದೆ ಚಿಂತೆಗೆಡೆಗುಡದೆ |
ಮಂದಮತಿಯಾಗದೆಯೆ ತಾಂ ಗೋ-
ವಿಂದನಂಘ್ರಿಯಃ ಭಜನೆ ಮಾಳ್ಪರ
ವಂದಿಸುತ್ತಿರುತಿರ್ದಳಲ್ಲಿ ಸುಕನ್ಯೆ ಜನಮಾನ್ಯೆ ॥ ೧೪ ॥

---

1 ಭೂಮಿಯ ಪತಿ-(ದೊರೆ).

ಬಿರುನುಡಿಯ ನಾಡದೆಯೆ, ಪೆರರೈ-
[1]ಸಿರಿಗೆ [2]ಕರುಬದೆ, ಹಿಂಸೆಗೆಯ್ಯದೆ,
ವರವಿಭವದಿಂ ಬೆರೆಯದಿರ್ದುದನಿಲ್ಲವೆಂದೆನದೆ, ।
ಬರಿದೆ ಪೊಳ್ತನು ಕಳೆಯದಿರ್ಪಳು
ಪರಮ ಸುಗುಣಾವಳಿಗೆ ನೆಲೆಯಾ-
ಗಿರುವಳೆನುತಂ ಪೊಗಳೆಜಗವಾ ತರುಣಿಸುಗುಣಮಣಿ ॥ ೧೫ ॥

ಇಂತು ಬಳೆದಾಕನ್ನೆಯವ್ವನ
ವಂತೆಯಾದಳು, ಮೆರೆವ ಸುಂದರ-
ಕಾಂತಿಯಿಂ ರೂಪದೊಳು [3]ಪಾಸಟಿಯಿಲ್ಲ ಏಕೆಗೆನೆ ।
ಅಂತರಂಗದ ಹರುಷದಿಂ ಭೂ-
ಕಾಂತನುಂ ರಾಣಿಯರು ಮಾಕೆಗ-
ನಂತವಿಭವದೊಳೀಯುತಿರ್ದರು ಬೇಡಿದೊ[4]ಡವೆಗಳ ॥ ೧೬ ॥

ಒಂದು ದಿನ ನರಪತಿಯು ಸತಿಯರ
[5]ಸಂದಣಿಯೊಳಾ ಸುತೆಯು ನೊಡಗೊಂ-
ಡಂದದಿಂ [6]ಜಲಕೇಳಿಗೆನುತಲಿ ತೆರಳಿದನು ಬನಕೆ ।
ನಂದನವನಿಳಿ [7]ಕೈವ ಬನದಾ
ಚಂದವುಂ ಕಂಡಲ್ಲಿ ಬಗೆಬಗೆ
ಯಿಂದ ತೋರುವ [8]ಗಿಡುವ [9]ಪಕ್ಕಿಯ, ಕೊಳನ ನೋಡಿದರು ॥ ೧೭ ॥

ಮೊಲ್ಲೆ, ಮಲ್ಲಿಗೆ, ಜಾಜಿ, ಸಂಪಗೆ,
[10]ಪುಲ್ಲ, [11]ವಕುಳ, [12]ಶಿರೀಷ, [13]ವಸುಗೆಯು,
ಚೆಲ್ವಕೇತಕಿ, ಹೊನ್ನೆ, ಸುರಹೊನ್ನೆಗಳು ಮೊದಲಾದ ।

---

1 ಐಶ್ವರ್ಯ. 2 ಹೊಟ್ಟೆಕಿಚ್ಚುಪಡದೆ. 3 ಸಮವಿಲ್ಲ. 4 ಆಭರಣ. 5 ಸಮೂಹ. 6 ಜಲಕ್ರೀಡೆಗೆ. 7 ತಿರಸ್ಕರಿಸುವ. 8 ವೃಕ್ಷ. 9 ಪಕ್ಷಿ. 10 ಅರಳಿದ. 11 ರೆಂಜೆಹೂವು. 12 ಬಾಗೆ ಹೂವು. 13 ಅಶೋಕ.

ಸಲ್ಲಲಿತ ಕುಸುಮಂಗಳೊಪ್ಪಿದು
ವಲ್ಲಿವನಿತೆಯು ರಲರ[1] ತಿರಿಯುತ[2]
ಲಲ್ಲೆಯಿಂ[3] ಸಂಚರಿಸುತಿರ್ದರು ನಿಲ್ಲದೆಯೆ ತಾವು ‖ ೧೮ ‖
ಅಂಚೆಸಾರಸ ಚಕ್ರವಾಕಗ
ಳಿಂಚರದ[4] ಪೊಕ್ಕಳೆಯು[5] ಸಾರಿಕೆ[6]
ಕೊಂಚೆನವಿಲು ಚಕೋರ ಬಕ ಮೊದಲಾದ ಪಕ್ಕಿಗಳು।
ಮುಂಚೆ ಪಾರುವ ಬನದೆ ತೊಳಲುತ
ಚಂಚರೀಕಂಗಳನು[7] ನೋಡುತ
ಚಂಚಲಾಕ್ಷಿಯರೆಯ್ದಿದರು ರತಿಪತಿಯಸೇನೆವೊಲು ‖ ೧೯ ‖
ತಿಳಿಗೊಳದೊಳೊಪ್ಪುವ ರಥಾಂಗದ[8]
ನಳಿನ ನಾಳವ[9] ಭುಜಿಪ ಹಂಸೆಯ
ಬಳಗದಿಂ ಝೇಂಕರಿಪ ಬಂಡುಣಿ[10] ತಂಡದಿಂದಲ್ಲಿ।
ಕಳರವಂ ಗೆಯ್ಯುವ ವಿಹಂಗದಿ[11]
ತೊಳಗಿ ಕಂಗೊಳಿಸುವುದು ಸರಸಿಯು
ನಳಿನ ಮುಖಿಯರ ಮನಕೆ ಸಂತಸವಿಾವುತಾ ಬನದಿ ‖ ೨೦ ‖
ಸಲಿಲ ಕೇಳಿಗೆ ನಿಂದರಲ್ಲಿಯೆ
ಲಲನೆಯರು ನೃಪಕನ್ಯೆಯೋರ್ವಳೆ
ತೊಳಲು ತ್ತೈತರಲೊಂದು ಪುತ್ತದಿ ಮಿಣುಕುಪುಳುವಂತೆ[12]।
ಬೆಳಗು ಕಾಣಿಸೆ ಕಂಡು ಚಪಲಂ-
ಗೊಳುತಲೇನಿದೊ ನೋಳ್ಪೆನೆನುತಂ
ಬಲದಿ ತಿವಿದಳು ಮುಳ್ಳಿನಿಂದವೆ ಕೀಳ್ವೆನಿದನೆಂದು ‖ ೨೧ ‖

---

1 ಪುಷ್ಪ. 2 ಬಿಡಿಸುತ್ತ, 3 ವಿನೋದದಿಂದ, 4 ಸುಸ್ವರ, 5 ಕೋಗಿಲೆ, 6 ಹೆಣ್ಣು, ಗಿಳಿ, 7 ತುಂಬಿ, 8 ಚಕ್ರವಾಕ, 9 ದಂಟು. 10 ಭೃಂಗ, 11 ಪಕ್ಷಿಗಳಿಂದ, 12 ಮಿಂಚಿನಹುಳು.

ಚ್ಯವನನೆನಿಪ ಮಹರ್ಷಿ ಭೃಗುಸಂ-
ಭವನು ದೃಢನಿಯಮದಲಿ ತಪವನು
ವಿವರಿಸುತಲಲ್ಲಿರ್ದನಂತರ್ಧ್ಯಾನ ಯೋಗದಲಿ |
ತಪಸಿ[1]ಯೆನ್ನುತೆ ತಿಳಿಯಳಾಪೆಣ್!
ತಿವಿಯೆ ನೋವನು ತಾಳಲಾರದೆ
ಜವದ ಮುಳಿಸಿಂ ಚೀರ್ದನಾಗಳೆಹೋ ಎನುತ್ತಲ್ಲಿ ॥ ೨೨ ॥
ಮುನಿಪನಾರ್ಭಟೆಗಂಜಿ ಸರಿದಳು
ಜನಕ[2]ಜನನಿಯರೆಡೆಗೆ ಕನ್ನೆಯು,
ಜನಪದದೊಳೆಲ್ಲರ್ಗವಾದುದುಜಲಮಲ ನಿರೋಧ |
ಜನಪತಿಯು ತಾಂ ಕೇಳ್ದು ಚಿಂತೆಯ
ಮನದಿ ನೊಂದುರೆ ತನ್ನ ಚರರಿಗೆ
ಬನದೆ ಋಷ್ಯಾಶ್ರಮಗಳಿರ್ಪುವೆ ನೋಡಿ ಬಹುದೆಂದ ॥ ೨೩ ॥
ಅವರರಸಿ ಮೌನೀಂದ್ರ ಚ್ಯವನನ
ವಿವರವನು ತಿಳಿದರಸನಲ್ಲಿಗೆ
ತವಕದಿಂದೈತಂದು ಬಿನ್ನವಿಸಿದರು ಹದನೆಲ್ಲ |
ಅವನಿಪತಿ ಕೇಳ್ದದನು ಚಿಂತಿಸಿ
ತಪಸಿಯೆ[3]ಡೆಗೈತಂದು ಮಣಿದೆ-
ನ್ನವಮತಿಯ ಮನ್ನಿಸಿ ಕಟಾಕ್ಷಿಪುದೆಂದು ನಿಂದಿರ್ದ. ॥ ೨೪ ॥
ಅರಸ! ಕೇಳೈ! ನಿನ್ನಣುಗಿ ನಿ-
ಷ್ಕರುಣದಿಂದುರುತರದ ಮುಳ್ಳಿಂ
ದಿ[4]ರಿದಳೆನ್ನಯ ಕಣ್ಗಳಡೆಗಿದುವಂಧ[5]ನಾಗಿರ್ಪೆ! |
ತೆರನರಿಯೆನೆಡರಡಸಿತೆನ್ನಯ

---

1 ಋಷಿ (ತಪಸ್ವಿ). 2 ತಂದೆತಾಯಿಗಳ ಹತ್ತಿರಕ್ಕೆ. 3 ತಪಸ್ವಿ. 4 ತಿವಿದಳು. 5 ಕುರುಡನು.

ವರತಪಕೆ ನಾನೇವೆ[1] ನಿಳೆಯೊಳು
ಕುರುಡನಾಗಿಹೆ ತನ್ನಬಾಳ್ವೆಯೆ ಹೀನವಾದುದಲಾ! ॥ ೨೫ ॥
ಎನ್ನ ಜಪತಪ ನಿತ್ಯಕರ್ಮಕೆ
ಬನ್ನಪಿಲ್ಲದೆ[2] ತೆರದಿ ಗುಣಸಂ
ಪನ್ನೆ ನಿನ್ನಯ ಕನ್ನೆ ಶುಶ್ರೂಷಿಸುಗೆ ಸತಿಯಾಗಿ।
ನನ್ನಿಯಿಂದೆನಗಿತ್ತು[3] ಮದುವೆಯ
ಮುನ್ನೆಸಗು ಸುಖವಹುದು; ಕುಡದೊಡೆ
ಮನ್ನಿಸಲು ತಾನಾರೆನೆಂದನು ಚ್ಯವನಮುನಿಯಾಗ ॥ ೨೬ ॥
ಕೇಳಿ, ನರಪತಿ ಮನದಿ ದುಗುಡವ[4]
ತಾಳಿ, ಕುರುಡಂಗೆಂತು ಕುಡುವೆನು
ಬಾಲೆಯನು, ರಾಕೇಂದುಫಾಲೆಯ[5], ವರಸುಶೀಲೆಯನು;।
ಆಲಯದಿ ರಾಜೋಪಭೋಗದೊ-
ಳಾಳಿ[6] ಮುಳುಗುವ ಚೆನ್ನೆ, ಯಿವನೊಳು
ಬಾಳಿಬದುಕುವುದುಂಟೆ? ಕಷ್ಟ! ವೆನುತೆ ಚಿಂತಿಸಿದ ॥ ೨೭ ॥
ಚೀನವಸ್ತ್ರವನುಟ್ಟು ಮೆರೆವೀ
ಮಾನಿನಿಯು ವಲ್ಕಲವ[7] ಧರಿಸುತೆ
ಮೌನಿವರರಾಶ್ರಮದೆ ವಸಿಸುವಳೆಂತು! ಸುಕುಮಾರಿ!।
ಏನ ಬಲ್ಲಳು ಸೇವೆಗೆಯ್ವುದ!
ನಾನುವಳೆ ಕಷ್ಟಕ್ಕೆ ಬನದೊಳು
ದಾನವಾಂತಕ! ಮುಂದೆ ಗತಿಯೇನೆಂದು ಚಿಂತಿಸಿದ ॥ ೨೮ ॥
ಕರುಣಿಸೈ! ಮುನಿಪಾಲ! ನಿನ್ನಯ
ಚರಣಸೇವೆಗೆ ನಾನೆ ನಿಲ್ವೆನು,

---

1 ಏನುಮಾಡಲಿ. 2 ತೊಂದರೆಯಿಲ್ಲದ. 3 ನಿಶ್ಚಯದಿಂದ. 4 ದುಃಖ.
5 ಪೌರ್ಣಮಿಯಚಂದ್ರನಂತೆ ಹಣೆಯುಳ್ಳವಳನ್ನು. 6 ಮುಳುಗಿ. 7 ನಾರ್ಮಡಿ.

ಪರಿಹರಿಸಿ ಕಾಯ್ಷನದ ಬಾಧೆಯ, ತಾಳಲಾರದಲೆ।
ತರುಣಿ ಸುಕುಮಾರಾಂಗಿ ನಿನ್ನಯ
ಪರಿಚರಿಯುವೆಂತೆಸಗಲಾರ್ಪಳು!
ಕುರುಡನೊಳುಬಾಳೆಂದುಪೇಳುವುದೆಂತು ನಾನವಳ ॥ ೨೯ ॥
ಎಂದ ಮಾತನು ಕೇಳಿ ಭೂಪನೊ
ಳೆಂದನಾ ಮುನಿ "ವಿಪ್ರವರರಿಗೆ
ಸಂದಿಹುದು ವೈವಾಹ ನೃಪಕನ್ಯೆಯರೊಳೆರವಿಲ್ಲ।
ಕುಂದದೆಯೆ ನೀನೀವುದವಳನು
ಸಂದೆಯ[1]ದಿ ಕುಡದಿರಲು ಬಾಧೆಗ
ಳೆಂದಿಗುಂ ನಿಲಲಾರವೆಂ" ದನು ಖತಿಯೊಳಾಮೌನಿ ॥ ೩೦ ॥
ಚಿಂತಿಸಿದ ಶರ್ಯಾತಿ ಮನದೊಳ
ಗೆಂತು ಪುತ್ರಿಯನೀವೆನಂಥಗೆ
ಕಂತು[2]ತಾಪನ ತಡೆಯಲಾರ್ಪಳೆ ಕನ್ನೆ, ಗುಣರನ್ನೆ?।
ಪಿಂತೆ[3] ಜನಗಳು ನಿಂದಿಸರೆ ಭೂ
ಕಾಂತನಾತ್ಮಜೆಯನು ಹಿತಾಹಿತ
ಮಿಂತೆನುತಯೋಚಿಸದೆ ಮುದುಪಗೆಕೊಟ್ಟನಿವನೆಂದು ॥ ೩೧ ॥
ವಿಷಯಸುಖವನು ಬಯಸಿಪೆಣ್ಗಳು,
ವಿಷಮ[4]ಮಾರ್ಗದಿ ಬೀಳ್ವರೆಂದೆನ
ಲಸಮಸುಂದರಿಯಂಧ[5]ವೃದ್ಧ ಮುನೀಂದ್ರನೊಳುಸೇರಿ,।
ಬಿಸನ[6]ಮಿಲ್ಲದೆ ನಿಲ್ಲಲಾರ್ಪಳೆ?
ಪಸುಳೆತನನಿಂ ದಾರಿ ತಪ್ಪಲು
ಮಸುಳಿ[7]ಪುದು ದುಷ್ಕೀರ್ತಿ ಸೂರ್ಯನ ಪಾವನಾನ್ವಯವ ॥ ೩೨ ॥

---

1 ಸಂಶಯದಿಂದ. 2 ಮನ್ಮಥನ ಬಾಧೆ. 3 ಹಿಂದೆ. 4 ಸಮವಲ್ಲದ. 5 ಕುರುಡ. 6 ವ್ಯಸನ. 7 ಮಲಿನವಾಗುವುದು.

ಗೌತಮನ ಮಾನಿನಿಯು ತಾಂ ಪುರು-[1]
ಹೂತನಿಂ ಮರುಳಾಗಿ ಶಾಪವ
ನಾತು ನರೆಯುಳೆ! ತಾರೆ ಚಂದ್ರಮನಲ್ಲಿ ಮನವಿಟ್ಟು ।
ಪಾತಕದೊಳಾಳಳೆ! ವಧೂಮಣಿ
ನೀತಿದಪ್ಪಿದೊಡೆಂತು ಸಹಿಸುವೆ
ನೋತು ಸಲಹಿದ ಶಿಶುವನೂಂಕುವೆನೆಂತು ಕಾಡೊಳಗೆ ॥ ೩೩ ॥

ಎನುತ ಚಿಂತಿಸಿ ಮನೆಗೆ ಬಂದಾ
ಜನಪತಿಯು, ಸಚಿವರನು[2] ನೆರಪಿಯೆ[3]
ಘನತರದ ಚಿಂತಾಂಬುರಾಶಿಯನೆಂತು[4] ದಾಂಟುವೆನು? ।
ತನಗೆ ಮುಂದೋರದು! ವಿವೇಕದಿ
ಸನುಮತದ ಕಜ್ಜವನು ಪೇಳುವು
ದೆನುತೆ ನುಡಿಯಲ್ಕವದಿರೆಂದರು ವಿನಯದಿಂದಾಗ ॥ ೩೪ ॥

ಜೀಯ! ಲಾಲಿಸು ಕಡುವುದಿವಳಂ
ನ್ಯಾಯವಲ್ತಂಥಕ ಕುರೂಪಿಗೆ
ಸಾಯುವದೆ ಲೇಸೆಂದು ತಿಳಿವಳು ಕನ್ನೆಯಿದರಿಂದ ।
ಈಯುವತಿಗಳಲಿತ್ತು ನೋಳ್ಪದ
ಪಾಯವೆಮಗಿನ್ನೇನ ಪೇಳ್ವೆವು
ರಾಯ ನಾಂಗಳೆ ನೋವನೊಂದುವುದೊಳಿತು ಯೋಚಿಸಲು ॥೩೫॥

ಅರಗುವರಿ,[5] ರೂಪವತಿ, ಹರೆಯದ[6]
ತರುಣಿ, ಕಾನನವಾಸವಂಥಕ
ನೆರೆಯನೋಳ್ಪವರಿಲ್ಲ,[7] ಇಂದ್ರಿಯ ನಿಗ್ರಹವಸಾಧ್ಯ ।
ಪರಿಕಿಸದೆ ಪುತ್ರಿಯನು ಕುಡುನೆಯ?

---

1 ಇಂದ್ರ. 2 ಮಂತ್ರಿಗಳನ್ನು. 3 ಸೇರಿಸಿ. 4 ಸಮುದ್ರ. 5 ರಾಜಪುತ್ರಿ. 6 ಪ್ರಾಯದ. 7 ಪತಿ.

ನರವರನೆ ಮುದುಪಂಗೆ ಜಸವೇಂ
ಬರುವುದೇವಾ[1]ಣೆಂದು ನುಡಿದರು ಮಂತ್ರಿಸತ್ತಮರು ॥ ೩೬ ॥
ಎನಲು ಕೇಳ್ದಾ ಚಿಂತೆಪರಿಯದೆ,
ಮನದ ದುಗುಡದೊಳರಮನೆಗೆ ಬಂ
ದನು ನೃಪಾಲನು ರಾಣಿಯರೊಳಿಂತೆಂದು ಯೋಚಿಸಿದ ।
ಮನುಮಥನ ಕಳೆಯಂತೆ ಬಳೆದಿಹ
ತನುಜೆಯನು ಬೇಡಿದನು ಮುನಿಪತಿ
ಸನುಮತಿಶನಿದಕೇನ ಪೇಳುವಿರೆನಲೊರೆದರಿಂತು ॥ ೩೭ ॥
ಮಗಳು ರೂಪವ ಬಯಸುವಳು, ಪಿತ-
ನೊ[2]ಗೆದಕುಲವನು ನೋಳ್ಪನಿಳೆಯೊಳು
ಸುಗುಣವನು ಪರಿಕಿಪರು ಮಾತೆಯರಿದುವೆ ಸಹಜನಲಾ ।
ಬಗೆವರಿಷ್ಟಾನ್ನವನು ಮಿಕ್ಕರು
ಮಗಳ ಕುರುಡಗೆ ಕೊಡಲಹುದೆ? ನೀಂ
ತೆಗೆಯೆನುತೆ ಪೆ[3]ಗಸಾರ್ದಸಿಂಧರು ರಾಣಿಯರು ಸೆಡೆದು! ॥ ೩೮ ॥
ನೋಡುವುದು ರೂಪವನು ವಿಭವವ
ಕೂಡಿದಾ ಶೀಲವನು ವಿದ್ಯೆಯ
ನಾಡೊಳಗೆ ಹರೆಯುವನು ಕುಲವನು ಪಣವವರನಲ್ಲೀ ॥
ಕಾಡೊಳಗೆ ಕಣ್ಗಾಣದಿರ್ಪನ
ಕೂಡಿ ಬಾಳ್ವಳೆ? ಸುಂದರಿಯು ನಾಂ
ಮಾಡಿದಾ ತಪಮಿಂತು ಪಣ್ತುದೆ! ಎಂದು ಚಿಂತಿಸಿದ ॥ ೩೯ ॥
ಬೇಡ, ಜನಪತಿ! ಮಗಳ ನೀಂ ಕುಡ
ಬೇಡ; ಮು[4]ದುಪಗೆ ಕಣ್ಣು ಕಾಣದೆ
ಕಾಡೊಳಗೆ ತಪವಿರ್ಪ ಮೌನಿಗೆನುತ್ತ ಕೆಳದಿಯರು ।

---

1 ಬಿಡು. 2 ಹುಟ್ಟಿದ. 3 ಹಿಂದಕ್ಕೆಹೋಗಿ. 4 ವೃದ್ಧನಿಗೆ.

ಕೂಡಿ ನುಡಿಯಲು ಮುಂದೆ ತೋರದೆ
ನಾಡೆರೆಯ[1] ನಳಲುತ್ತಲೇವೆನು[2]?
ರೂಢಿಯೊಳಗೀ ಬಾಳ್ವೆಯಿಂ ಲೇಸಲ್ತೆಸಾವೆಂದ ! ॥ ೪೦ ॥

ಇಂತು ಚಿಂತಿಪ ಸಮಯದೊಳು, ಭೂ-
ಕಾಂತಸುತೆಯೈತಂದು ನುಡಿದಳು,
'ಚಿಂತೆಯೇತಕೆ? ಬೊಪ್ಪ[3]! ತನ್ನನು ಕೊಡುಮುನೀಂದ್ರಂಗೆ' ।
ಸಂತಪಿಸುತಾತನನು ಸೇವಿಪೆ
ನಂತರಂಗದ ಬಯಕೆಯೆನಗಿದು
ಪಂತವೇತಕೆ ಜನದ ಹಿಂಸೆಯ ಬಿಡಿಪುದೆನಗುಚಿತಂ ॥ ೪೧ ॥

ಬಾಲೆ! ನೀನರಮನೆಯ ಸಖಿಯರ
ವೋಳದಲಿ ಕೂಡಿರ್ದು ಸುಖದಿಂ
ಬಾಳುವಳು, ಬನದಲ್ಲಿ ಪಣ್ಗಳನುಂಡುನಾರುಟ್ಟು ।
ತಾಳಿ ಚಳಿ ಬಿಸಿಲುಗಳ ಗಣಿಸದೆ,
ಕಾಲಯಾಪನೆಗೆಯ್ವುದೆಂತು[4] ಸು-
ಶೀಲೆ, ಮಗಳಿಗೆ ನೋವನೀವನು ತಂದೆಯೆನಿಸುವನೆ? ॥ ೪೨ ॥

'ಪಿತನೆ! ಚಿಂತಿಸಬೇಡ; ಭೋಗದೊ
ಳತಿಶಯದ ಮನವಿಲ್ಲ, ಸೇವಿಸಿ
ಪತಿಯ ಮನ್ನಿಪುದೆನಗೆ ಹಿತವೆಂದಿರ್ಪೆ ಭಾವದಲಿ ।
ಇತರ ಯೋಚನೆಯಿಲ್ಲ, ನಾಂ ದು
ರ್ಗತಿಗೆ ಸಲುವವಳಲ್ಲ, ತಪ್ಪದೆ
ಹಿತನ ಜನತತಿಗೆಳಸಿ ಕುಡುಪುದು ತನ್ನನಾಮುನಿಗೆ' ॥ ೪೩ ॥

ಮಗಳೆ! ಕಣ್ಗಾಣದ ಕುರೂಪಿಗೆ
ಬಗೆಯರಿಯದಾನಿತ್ತೆನಾದೊಡ,
ನಗದೆ ಲೋಕವು? ರಾಜ್ಯಮಾದೊಡಮುಳಿವೆನಾನೀಗ ।

---

1 ಭೂಮಿಪತಿ. 2 ಏನುಮಾಡಲಿ. 3 ತಂದೆಯೇ. 4 ಕಾಲಹರಣೆ.

ಸುಗುಣಮಣಿಯನು ಕಾಡಿಗಟ್ಟಿಯೆ
ಜಗದಿತಾನೀರ್ದೇನ ಮಾಳ್ಪೆನು
ಸೊಗವನರ್ಥಿ[1]ಸೆ, ನಿನ್ನ ಕಷ್ಟವೆ ಕಷ್ಟವೆನಗಣುಗಿ ॥ ೪೪ ॥

ತಂದೆ! ಕಾಮಿಸೆನಿಹದ ಭೋಗವ,
ಕುಂದನೀಯದೆ ಕುಲಕೆ, ಬಹುಳಾ-
ನಂದದಿಂ ಪತಿಸೇವೆಗೆಯ್ವೆನು ಬಕುತಿಯಿಂ[2] ಸತತ।
ಚಂದದಿಂದಿರುತಿರ್ಪೆನುಳಿದುದ
ನೊಂದನೆಳಸುವಳಲ್ಲ[3] ಪತಿ ತಾ
ನಂಧನೆನ್ನದೆ ಮದುವೆ ಮಾಳ್ಪುದು ತನ್ನ ಮುನಿಗಿತ್ತು ॥ ೪೫ ॥

ಎನಲು ಮುದದಿಂ ಚ್ಯವನ ಮುನಿಪಗೆ
ತನುಜೆಯನು ತಾ ನೀವೆನೆನುತಲಿ
ಮನದಿ ನಿರ್ಣಯಿಸಿದನು, ನರಪತಿಯವಳ ನೊಡಗೊಂಡು।
ಜನಸಹಿತ ನಡೆತಂದನಾಗಳೆ
ಬನಕೆ, ಯೋಗದೊಳಿರ್ದ ಮುನಿಪಗೆ
ವಿನಯದಿಂ ಕೈಮುಗಿದು ಬಿನ್ನವಿಸಿದನು ಸಂತಸದಿ ॥ ೪೬ ॥

ಸಲಹು ಮುನಿಪತಿ! ಜೀವಕೋಟಿಗ
ಳಳಲ ಬಿಡಿಸು; ಸುಕನ್ಯೆಯನು ನಿನ
ಗೊಲವಿನಿಂದರ್ಪಿಸಿದೆನೀಕ್ಷಿಸು ಕರುಣೆಯಿಂದವಳ।
ಕೊಳುವುದೆನೆ ಮುನಿಮೆಚ್ಚಿ ಮಾಕುಟ
ನಿಳಯರಂಗನ ನೆನೆದು ಮನದಲಿ
ಲಲನೆಯನು ಕೈಕೊಂಡು ಬಾಧೆಯ ಬಿಡಿಸಿದನು ಜನಕೆ ॥ ೪೭ ॥

---

1 ಅಪೇಕ್ಷಿಪೆನು. 2 ಭಕ್ತಿಯಿಂದ. 3 ಬಯಸುವಳಲ್ಲ.

# ಎರಡನೆಯ ಸಂಧಿ.

**ಸೂ||** ಮುನಿಗೆ ಕನ್ನೆಯನಿತ್ತು ತನ್ನಯ
ಮನೆಗೆ ಬಂದನು ಭೂಮಿಪತಿಯತಿ-
ವಿನಯದಿಂ ಪತಿಸೇವೆಗೆಯ್ಯುತಲಿರ್ದಳಾ ಸಾಧ್ವಿ[1] ||

ಕೇಳು ಕುಂತೀ ತನಯ! ಮುನಿಪಗೆ
ಬಾಲೆಯನು ನೃಪನೊಲಿದು ಕೊಡಲಾ-
ವೇಳೆಯೊಳ್ ಪ್ರಾಣಿಗಳುಪದ್ರವಮಡಗಿ ಸುಖವಾಯ್ತು |
ಲೋಲಲೋಚನೆ ಸಹಿತ ದಿವ್ಯ ದು
ಕೂಲವಸನಾ[2]ಭರಣಗಳ ಕುಡೆ
ಲೀಲೆಯಿಂ ಪಿಂದಿರುಗಿ ಕೊಟ್ಟನು ಮುನಿಯಿವೇಕೆನುತ || ೧ ||

ಒಂದೆರಡು ದಿನವಿರ್ದು ವನದಲಿ
ತಂದೆತಾಯ್ಗಳು ತಮ್ಮ ಪುರಕಾ-
ನಂದದಿಂ ಪೊರಮಡಲು ಯತ್ನಿಸಿ ಮುನಿಯನುಜ್ಞೆಯನು |
ಚಂದದಿಂ ಪಡೆಯುತ್ತ ಮಗಳಿಗ
[3]ಮುಂದೆವಸ್ತುಗಳೀಯೆ ಸತಿ ತಾ
ನೊಂದುಮಂ ಕೈಕೊಳದೆ ನುಡಿದಳು ವಿನಯದಿಂದಾಗ || ೨ ||

ಉಡಿಗೆ ತೊಡಿಗೆಗಳೇಕೆನಗೆ? ನಾ
ರುಡೆಯನುಡುವೆನು, ತಂದೆ! ಋಷಿಗಳ
ಮಡದಿಯರವ[4]ೋಲಿರ್ಪನೆಳಸುವಳಲ್ಲ ಭೋಗಗಳ |
ದುಡುಕುವಳು ಮಗಳೆಂಬ ಚಿಂತೆಯ
ಬಿಡು, ಪತಿಯನುಪಚರಿಸಿ ಜಸ[5]ವನು
ಪಡೆವೆನೀ ಪೊಡವಿಯೊಳು ತಾರೆನು ದೋಷವನು ಕುಲಕೆ || ೩ ||

1 ಪತಿವ್ರತೆ. 2. ರೇಷ್ಮೆ ವಸ್ತ್ರ. 3 ಹೆಚ್ಚಾದ. 4 ಬಯಸುವವಳಲ್ಲ. 5 ಕೀರ್ತಿಯನ್ನು.

ಎಳೆಯತನದಲಿ ರಾಜ ಭೋಗದೆ
ಬಳದೆ, ಈ ಹರೆಯದಲಿ ಕಾಡೊಳ
ಗೆಲೆವನೆಯೊಳಾ ವಾಸಿಸುತ್ತಿಹೆ, ಯೆಂತು ಸುಕುಮಾರಿ! ।
ಚಳಿಯ ಬಗೆಯದೆ ಬಿಸಿಲಿಗಂಜದೆ,
ಮಳೆಯ ಗಣಿಸದೆ ಕಂದಮೂಲಂ-
ಗಳನು ತಂದಿನಿಯನನು[1] ಪೊರೆವುದದೆಂತು ನೀನೆಂದ ॥ ೪ ॥
ತಂದೆ! ನೋಯದಿರೆನ್ನ ಬಗೆಯಾ
ನಂದದಿಂ ತುಂಬಿಹುದು, ಪತಿ ಗೋ-
ವಿಂದನಿಭ[2]ನೆಂದೆನುತ ತಿಳಿದಿಹೆ, ನೋಯದಿಹೆನಿಲ್ಲಿ ।
ಸಂದರುಂಧತಿಯಾ ವಸಿಷ್ಠನ
ಚಂದದಿಂದನಸೂಯೆ ಯತ್ರಿಯ
ನೊಂದಿದಂದದಿ ಸೇವಿಪೆನು ನಾನೀ ಮುನೀಶ್ವರನ ॥ ೫ ॥
ಎನಲು ಮೆಚ್ಚುತೆ ಮಗಳ ಭಾವಕೆ,
ಸನುನುತಿಸಿ ಸಂತಸದಿ ನುಡಿದರು,
ಜನಪತಿಯುಮಾ ರಾಣಿಯುದುಮುರು ನೀತಿಸಾರಗಳ ।
ತನುಜೆ, ಪೆಸರೆ ಸುಕನ್ಯೆ, ನಿನ್ನಯ
ಮನವ ತಿಳಿದಿಹೆವಾದೊಡಂ ಕೇಳ್
ಜನರಮೆಚ್ಚಿಪುದರಿದು ದೋಸಕೆ ಸಿಲುಕದೆಯೆ ಜಗದಿ ॥ ೬ ॥
ಗುರುಹಿರಿಯರುಕ್ತಿಗಳಮೀರದೆ,
ಪೆರರ ಸಿರಿಯನು ಕಂಡು ಕರುಬದೆ[3],
ಪೆರರ ನಿಂದಿಸದೈಸಿರಿಗೆ ಗರ್ವಿಸದೆ, ಬಡತನಕೆ ।
ಕೊರಗದೆಯೆ, ತಂದುದನೆ ಪಿರಿದೆಂ
ದರಿದು ರಕ್ಷಿಸಿ ಪತಿಯ ತಣಿಸುವ
ತರುಣಿತಾಂ 'ಸಾಧ್ವೀಶಿರೋಮಣಿ' ಮಗಳೆ ಲೋಕದಲಿ ॥ ೭ ॥

---

1 ಪತಿಯನ್ನು. 2 ಸಮಾನನು. 3 ಹೊಟ್ಟೆಕಿಚ್ಚು ಪಡದೆ.

ಅರಗುವರಿ[1] ನೀನೆಂತು ಮುನಿಪನ
ಪೊರೆವೆಯೌ? ನಿನ್ನಿನಿಯನಾದೊಡೆ
ಕುರುಡನಿದು, ಕಗ್ಗಾಡು[2], ಕೆಳದಿಯರಿಲ್ಲ ಸಂತವಿಸೆ।
ಮರುಳುತನದಿಂ ಬೆರೆವ ಲೀಲೆಯು
ಹರೆಯವಿದು ಶೀಲವನು ಕಾಯ್ವಾ
ಪರಿಯದೆಂತುಂಟೊ? ಮಗಳೆ ಕೀರ್ತಿಗೆ ಕುಂದನೀಯದಿರೌ! ‖ ೮ ‖
ಪತಿಗೆ ವಂಚಿಸಿ ಭುಜಿಸ ಸಲ್ಲದು,
ಪತಿಯ ನಿಂದಿಸ ಸಲ್ಲದನ್ಯರ
ಚತುರತೆಗೆ ವಶಳಾಗಸಲ್ಲದು, ಪೆರರ ಮನೆಗಳಿಗೆ।
ಸತಿಯು ಪೋಪುದು ಸಲ್ಲದೇಗಳು[3]
ಮತಿಶಯದ ನಗೆ ಸಲ್ಲದಿನನಾ
ಣತಿಯ[4] ಮೀರಲು ಸಲ್ಲದಾ ಸಾಧ್ವಿಯರ ನೀತಿಯಿದು ‖ ೯ ‖
ಮನ್ನಿಪುದು ಮಾನ್ಯರನು, ಮೇಣಾ
ಪನ್ನರನು[5] ಕರುಣಿಪುದು, ದುರುಳರ
ಗನ್ನಗತಕಕೆ[6] ಸಿಲುಕದಿರ್ಪುದು, ಪತಿಯೆ ಪರದೈವ।
ಸನ್ನುತನು ತಾನೆಂದು ಭಾವಿಪು
ದನ್ನೆಯಕೆ[7] ಮನವಿಡದೆ, ಗುಣಸಂ
ಪನ್ನೆಯೆನಿಪುದು ಸತಿಗೆ ತಕ್ಕುದು ಮಗಳೆ ಕೇಳೆಂದ ‖ ೧೦ ‖
ಅತಿಥಿಗಳ ಸತ್ಕರಿಸಿ ಯಭ್ಯಾ-
ಗತರ ಮನ್ನಿಸಿ ಮನೆಯ ಮನೆವಾ-
ರತೆಯನೆಚ್ಚರದಪ್ಪದೀಕ್ಷಿಸಿ[8] ಯಗ್ನಿಹೋತ್ರಗಳಾ।

1 ರಾಜಪುತ್ರಿ. 2 ಭಯಂಕರವಾದ ಕಾಡು. 3 ಯಾವಾಗಲೂ. 4 ಪತಿಯ ಅಪ್ಪಣೆಯನ್ನು 5 ಆಪತ್ತಿಗೆ ಗುರಿಯಾದವರನ್ನು. 6 ಕಷ್ಟದ ಮಾತುಗಳಿಗೆ. 7 ಅನ್ಯಾಯಕ್ಕೆ. 8 ಗೃಹಕೃತ್ಯದ ಮಾತು.

ಅತಿಶಯದಿ ರಕ್ಷಿಸುತೆ ಪತಿಯಾ
ಣತಿಯ ಮೀರದೆ ಭಕ್ತಿಭಾವದ
ಹಿತದಿ ವರ್ತಿಪ ಸತಿಗೆ ಸದ್ಗತಿ ಕರತಲಾಮಲಕ ‖ ೧೧ ‖
ಪತಿಯ ಪೆಸರನು ನುಡಿಯಲಾಗದು,
ಪತಿಯ ನೋಯಿಪ ಮಾತು ಸಲ್ಲದು,
ಪಿತನ ವಿಭವವ ನೆನೆದು ಗರ್ವಿಸ ಸಲ್ಲದೌ ಸತಿಗೆ ।
ಖತಿ[1]ಯು ಸಲ್ಲದು, ಮದವು ಸಲ್ಲದ
ದತಿಶಯದ ಪರಿಹಾಸ ಸಲ್ಲದು,
ಮತಿಯುತೆಯೆ ಮರೆದಿಹುದು ಸಲ್ಲದು, ಸಲ್ಲದಾಚೌ[2]ರ್ಯಂ ‖ ೧೨ ‖
ಕೇಳಿರುವೆ ಸಾವಿತ್ರಿ ಗುಣಗಳ-
ನಾಲಿಸಿಹೆ ಯನಸೂಯೆ ಚರಿತೆಯ
ಶೀಲವದರುಂಧತಿಯ ಜಗದಿ ನೆ[3]ಗಳ್ತೆ ವಡೆದಿಹುದು ।
ಬಾಲೆ ಶೈಬ್ಯೆಯ ಕಷ್ಟವನು ನೀಂ!
ಕೇಳಲಿಲ್ಲವೆ? ಜಾಣೆ! ನಿನಗೇಂ
ಪೇಳತಕ್ಕುದು, ಕುಲಕೆ ಕುಂದನು ತಾರದಿರು, ಮಗಳೇ ‖ ೧೩ ‖
ಆ[4]ಯವಂತದರಿಂದ ಪೆರ್ಚದ
ಬೀ[5]ಯವನು ಮಾಡುತ್ತ ಮಿಕ್ಕುದ-
ಪಾಯವಿಲ್ಲದ ತಾ[6]ಣದಲಿ ರಕ್ಷಿಸುತಲಿರುತಿಹುದು ।
ನೋಯನುಡಿಯದೆ ಪೆರರ, ದುರುಳರ
ಮಾಯೆಗಳಿಗೊಳಗಾಗದಿರ್ಪಳೆ
ತಾಯೆಕೇಳೌ ಸಾಧ್ವಿಯೆನಿಪಳು ಜಸವ ಪೊಂದುತಲಿ ‖ ೧೪ ‖
ಪಾವನನು ಮುನಿ, ನೀನು ಜನಿಸಿ ವಿ
ಭಾ[7]ವಸುವ ಕುಲದೊಳಗೆ ಯೊತನ

---

1 ಕೋಪವು. 2 ಕಳ್ಳತನ. 3 ಖ್ಯಾತಿ. 4 ಆದಾಯ. 5 ವೆಚ್ಚ. 6 ಸ್ಥಾನದಲ್ಲಿ. 7 ಸೂರ್ಯನ.

ಕೈವಿಡಿದ, ಬಾಲ್ಯದಲಿ ಸುಖದಿಂ ಬಳೆದೆ, ಈ ಬನದಿ |
ಸೇವಕರು ನಿನಗಿಲ್ಲವೀಗಳೆ
ನಾವು ನಗರಿಗೆ ಪೋದಪೆವು, ನೀ
ನೇಪೆಯೋ?[1] ಗುಣರನ್ನೆ ಪಾಲಿಸು ಪತಿಯನಕ್ತಿಯಲಿ ‖ ೧೫ ‖
ಎಂದು ಪೇಳಿಯೆ ಮನದ ದುಗುಡವ
ಮುಂದುಗೊಳಿಸದೆ ಹರಸಿ ಮರಳ್ದರು
ತಂದೆತಾಯ್ಗಳು ತಮ್ಮ ಪುರಕಲ್ಲಿಂದ ಚಿಂತೆಯಲಿ ।
ಸುಂದರಿಯು ತಾನವಳ ಕಳುಹಿಸಿ
ಬಂದಳಾಶ್ರಮಕಲ್ಲಿ ಪತಿಯನ-
ಮಂದಭಕ್ತಿಯಿನೊಲ್ದು[2] ಸೇವಿಸುತಿರ್ದಳೆಡೆಬಿಡದೆ ‖ ೧೬ ‖
ವನಿತೆಯುಳಿದಾ ರಾಜಭೋಗವ
ಮುನಿಸತಿಯರಂದದೊಳು ವಲ್ಕಲ-
ವನು ಧರಿಸಿ ದಿನದಿನದೆ ಮೀವಳು ಶೀತಜಲದಲ್ಲಿ |
ವಿನಯದಿಂ ಪತಿಯಾಣತಿಸಿದಂ
ತನುಗೊಳಿಸಿ ತಂದೀವಳಾತಗೆ
ಘನತರದ ಕುಸುಮವನು ಸಮಿಧೆಯ ದರ್ಭೆ ಪತ್ರಗಳ ‖ ೧೭ ‖
ಕಂದಮೂಲಫಲಂಗಳನು ತಾ
ನಂದದಿಂ ಸಂಗ್ರಹಿಸಿ ತರುವಳು
ಕುಂದದೀಕ್ಷಿಸುತಿರ್ಪಳಗ್ನಿತ್ರಯವನೆಚ್ಚರೊಳು[3] |
ಚಂದದಿಂ ಬೆಂನೀರ ಕಾಯಿಸಿ
ಸುಂದರಿಯೆ ಮೀಯಿಪಳು ಪತಿಯನು,
ತಂದು ಕೃಷ್ಣಾಜಿನವ ಪೊದಿಸುವಳಾ ಮಹಾಮುನಿಗೆ ‖ ೧೮ ‖

---

1 ಏನುಮಾಡುವೆಯೋ. 2 ಅತಿಶಯವಾದ ಭಕ್ತಿ. 3 ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ಅಗ್ನಿಗಳು.

ಆಸನದಿ ಕುಳ್ಳಿರಿಸಿ ಜಲವನು
ಲೇಸಿನಲರ್ಗಳ[1] ತಿಲವ ದರ್ಭೆಯ-
ನಾ ಸಮಿಧೆಗಳನಿರಿಸಿ ಯಾರ್ಯತೆ, ನಿತ್ಯಕರ್ಮಕ್ಕೆ |
ಮಿಾಸಲಹವಸ್ತುಗಳಿದೋ ಎಂ-
ದಾಸರಿಂ ತೋರಿಸುತೆ ತಾಂ ಪೂ-
ಜಾಸಮಯದಲಿ ಕುಡುವಳಿನಿಯನು ಕೇಳಿದುವನಲ್ಲಿ ॥ ೧೯ ॥
ಬೇಯಿಸುತೆ ನೀವಾರದಕ್ಕಿಯ
ಪಾಯಸವ ಸವಿಗೊಳಿಸಿ ಯುಣಿಸುವ-
ಳಾಯಸಂಗೊಳದಂತೆ ಕೈದೊಳೆಯುವಳು ಬಳಿಕಿನಲಿ |
ಆ ಯುವತಿ ತಾಂಬೂಲವನು ತಂ-
ದೀಯುವಳು, ಪತಿಯಾಜ್ಞೆಯಿಂ ತಾಂ
ನೋಯದುಣ್ಬಳು, ಮಿಕ್ಕದನು ಪಣ್ಗಡ್ಡೆಗಣಸುಗಳ ॥ ೨೦ ॥
ಬಳಿಕಲಿನಿಯನ ಸನಿಹದಲ್ಲಿಯೆ
ಕುಳಿತು, ವಿನಯದಿ ಕಾಲ್ಗಳನು ತಾಂ
ಚಳಿಯ ದೋರದವೋಲು ಹಿಸುಕುವಳೆಲರ[2] ಹಾಯುವಳು |
ತೊಳಗುವಸ್ತಮಯದಲಿ ಸೂರ್ಯನು
ಮುಳುಗುತಿಹನೆಂದೆಚ್ಚರಿಸಿ, ವರ
ಜಲವ ತಂದಿತ್ತರ್ಘ್ಯವನು ಕೊಡಿಸುವಳು ಸೂರ್ಯನಿಗೆ ॥ ೨೧ ॥
ಹೋಮ ಜಪ ತಪ ನಿತ್ಯಕರ್ಮದ
ನೇಮಗಳ ಕುಂದಿಸದೆ ಮಾಡಿಸು
ತಾ ಮಹಾಸತಿ ರಾತ್ರಿಯಲಿ ಪತಿಗಿತ್ತು ಪಣ್ಗಳನು |
[3]ಶ್ಯಾಮೆ ಮಿಕ್ಕದನುಂಡು ನಿರ್ಮಲ
ಭೂಮಿಯಲಿ ಮೆಲ್ವಾಸ[4] ಪಾಸಿಯೆ

---

1 ಹೂಗಳನ್ನು. 2 ಗಾಳಿಬೀಸುವಳು. 3 ನಡುಪ್ರಾಯದವಳು. 4 ಮೆತ್ತನೆಯ ಹಾಸಿಗೆ.

ತಾ ಮಲಂಗಿಪಳೆನಿಯನನು[1] ಕುಳ್ಳಿಹಳು ಕಾಲ್ದೆಸೆಗೆ ॥ ೨೨ ॥
ಆಗ ಮುನಿಪತಿ ತನ್ನ ಸತಿಗನು
ರಾಗದಿಂ ಹದಿಬದೆಯ ಧರ್ಮದ
ನಾಗಮೋಕ್ತಕ್ರಮದಿ ವಿವರಿಸಿಯವರ ಕಥೆಯುಸಿರೆ ।
[2]ನಾಗಯಾನೆಯು ಕೇಳ್ದು ತಲೆಯಂ
ತೂಗಿ ಮನದಲಿ ತಿಳಿದು ನಮಿಪಳು,
ಯೋಗಿಪೇಳ್ದವುಗಳೊಳು ಕೆಲವರ ಚರಿತೆಯನು ಕೇಳ್ಮೆ ॥ ೨೩ ॥
ಭೂತಳದಿ ವಿಖ್ಯಾತೆಯಾಗಿಹ
ಸೀತೆ, ಜನಕನಪುತ್ರಿ, ಕಾಡೊಳು
ಯಾತನೆಗಳನು[3]ಭವಿಸಿ, ದುರುಳನ ಪುರದೆ ಸೆರೆವಟ್ಟು।
ಯಾತುಧಾನನ[4] ಬಲೆಗೆ ಸಿಲುಕದೆ
ವೀತಿಹೋತ್ರನ[5] ಪೊಕ್ಕು ಮರಳಿದ
ಪೂತೆ[6]ಯಾಕೆಗೆ ಸಾಟಿಗಾಣೆ[7]ನು ಮೂರುಲೋಕದಲಿ ॥ ೨೪ ॥
ಅತ್ರಿಮುನಿಪನ ಸತಿಯು ಪರಮಪ-
ವಿತ್ರೆ ತಾನನುಸೂಯೆ ಪೆಸರಿಂ
ಧಾತ್ರಿಯೊ[8]ಳು ಕೀರ್ತಿಯನು ಪಡೆದಳು ಪಾವನೆಯೆನುತ್ತ ।
ಆ ತ್ರಿಮೂರ್ತಿಗಳಿವಳ ಪಾತಿ-
ವ್ರತ್ಯಮಂ ಶೋಧಿಸಲು ಬರೆ ಶಿಶು
ಮಾತ್ರರನೆ ತಾಂ ಮಾಡಿ ನಿಯಮವ ರಕ್ಷಿಸಿದಳೀಕೆ ॥ ೨೫ ॥
ಗೌರಿಯರಸನೆ ನಿಂದೆ ಕೇಳುತೆ
ಸೈರಿಸದೆ ಪಿತನೆಸಪ ಜನ್ನದಿ[9]
ಹಾರಿ ಮಡಿದಳು ಬೆಂಕಿಯೊಳು ಸತಿ ಮರುಜನುಮದೊಳಗೆ ।

1 ಪತಿಯನ್ನು. 2 ಆನೆಯಂತೆ ನಡೆಯುವಳು. 3 ಕಷ್ಟ. 4 ರಾಕ್ಷಸನ. 5 ಅಗ್ನಿಯ. 6 ಪರಿಶುದ್ಧಳು. 7 ಸಮಾನ 8 ಭೂಮಿಯಲ್ಲಿ. 9 ಯಜ್ಞದಲ್ಲಿ.

ಸಾರಿ ಮೇನಕೆಯಲ್ಲಿ ಪುಟ್ಟಿಯೆ,
ಘೋರತಪವಂ ಗೆಯ್ದು ಮೆಚ್ಚಿಸಿ,
ಮಾರಹರನೊಲುಮೆಯನು ಪಡೆದರ್ಧಾಂಗಿಯೆನಿಸಿದಳು ॥ ೨೬ ॥
ಹದಿಬದೆಯು ಸಾವಿತ್ರಿಯಿನಿಯನಿ
ಗೊದವಿದಾ ಮರಣವನು ಕೇಳ್ದುಂ
ಬೆದರದೆಯೆ, ವರಿಸುತ್ತೆ ಸೇವಿಸಿ ಯುತ್ತಮಾವದಿರ ।
ಮುದದಿ ನೆಡೆವಿಡದಿರ್ದು ಪತಿಯನು
ಪಡೆಯುತಾಯುವನಾ ಕೃತಾಂತನಿ[1] –
ನದುಭುತದ[2] ಮೈಮೆಯನು ತೋರಿದಳಶ್ವಪತಿಯಣುಗಿ ॥ ೨೭ ॥
ಇಂತು ಕಷ್ಟಂಗಳೊಳು ಸಿಲ್ಕಿಯು
ಮಂತರದಿ ಲೆಕ್ಕಿಸದೆ ಬಾಳ್ದರ
ನಂತನಾರಿಯರವರ ಪೊಗಳ್ವೊಡೆ ಧಾತ[3]ಗಳವಲ್ಲ ।
ಕುಂತಿಯಾ ಗಾಂಧಾರಿ ಮತ್ತೆ ಶ
ಕುಂತಲೆ ಯರುಂಧತಿಯು ಮೇಣ್ದಮ—
ಯಂತಿ ಮೊದಲಾಗಿರ್ಪರೆನುತಭಿವರ್ಣಿಸಿದನವರ ॥ ೨೮ ॥
ಹದಿಬದೆಯ ಧರ್ಮಗಳ ಸನ್ಮುನಿ
ಸುದತಿಯರ ಚರಿತೆಗಳ ಪೇಳುತ
ಲೊದವಿದಾನಂದದಲಿ ನಿದ್ರಿಸೆ ಪತಿಯು ತಾಂ ಮಲಗಿ ।
ಉದಯದೊಳಗೆಚ್ಚರುತೆ ನಿರ್ಮಲ
ಹೃದಯದಿಂ ಜಾನಿಸುತೆ[4] ಪತಿಯನು
ಮುದದಿ ತರಗೆಲೆವನೆಯ ಸಾರಿಸಿ ಯಂದಗೊಳಿಸುವಳು ॥ ೨೯ ॥
ನೀರಪಾತ್ರೆಯ ಚೆಲ್ವಮಣ್ಣನು
ನೀರೆ ತಂದಿರಿಸುವಳು, ಶೌಚಕ್ಕೆ[5],

1 ಯಮನು. 2 ಆಶ್ಚರ್ಯದ. 3 ಬ್ರಹ್ಮನಿಗೆ. 4 ಧ್ಯಾನಿಸುತ್ತ. 5 ತೊಳೆದು ಕೊಳ್ಳುವುದಕ್ಕೆ.

ನೀರನೆಚ್ಚರ[1]ಗೊಳಲು ಕರೆದೊಯ್ದಲ್ಲಿ ಜಲಮಲನ ||
ತೀರಿಸಿಯೆ ತೊಳೆಯುವಳು, ಕರೆತಂ
ದಾ[2]ರಯಿಕೆಯಿಂ ಕುಳ್ಳಿರಿಸಿ, ಯೊ—
ಕ್ನೀರಿನಿಂ ಪಲ್ಲುರ್ದಿ ಮೊಗವನು ತೊಳೆಯಿಸುವಳೊಲಿದು || ೩೦ ||

ಬೀಸುವಳು ಬಿಸಿಲಲ್ಲಿ ಕೊ[3]ಳವೇ
ರ್ವೀಸಣಿಗೆಯಿಂ, ಚಳಿಯಕಾಲದೊ
ಳಾಸರಿಂ ಕಾಯ್ಸುವಳು ಮೆಯ್ಯನು ಬಿಸಿಯನಾರಿಸಿಗೆ |
ಗಾಸಿವಡಿಸಳು ಮಳೆಗೆ ಸಿಲುಕಿಸ
ಳಾ ಸುದತಿ ಪತಿಯಿಂದೆ ಕರ್ಮವ
ಗೈಸಿಯಭ್ಯಾಗತರ ಮನ್ನಿಪಳೊಲ್ದು ದಿನದಿನವು || ೩೧ ||

ಚ್ಯವನ ಮುನಿಪತಿ ಮೆಚ್ಚಿದನು, ತಾ
ನಿವಳ ಶೀಲಕೆ ಸದ್ಗುಣಂಗಳಿ
ಗವನಿತಳದೊಳಗಿಲ್ಲವೆ[4]ಣೆ ಯೆಂದೆನುತೆ ಮನದಲ್ಲಿ |
ಸವನಿಸಿತು ಕುರುಡೆಂದು ಚಿಂತಿಸ
ದವೊಲು ಶುಶ್ರೂಷಿಸಿ ಸುಕನ್ಯೆಯೆ
ನವೆಯದವಳೆಂದೆನುತ ಪೊಗಳಿತು ಮುನಿಸತೀನಿವಹ || ೩೨ ||

ಅರಮನೆಯ ವಾಸವನು, ವಿಭವವ
ಮರೆದು, ಕಾಡೊಳಗೆಲೆಯ ಮನೆಯೊಳು
ಕುರುಡನೊಡನಿಹುದೆಂತು ವಿಷಯಸುಖಂಗಳನು ಜಯಿಪ |
ಹರೆಯವೇ? ತಾನಿವಳ ಸ್ಥೈರಣೆ
ಪಿರಿದೆನುತ ಪೊಗಳಿದರು ಸಗ್ಗ[5]ದ
ತರುಣಿಯರು ಮುಚ್ಚರಿಪರಾರ್ಸಗುಣಕ್ಕೆ ಲೋಕದಲಿ || ೩೩ ||

---

1 ಪತಿಯು. 2 ಎಚ್ಚರದಿಂದ. 3 ಲಾಮಂಚ. 4 ಸಮಾನ. 5 ಸ್ವರ್ಗದ.

ಶಿಂಗರಕೆ ಮನವಿಡದೆ, ಸತಿತ
ನ್ನಂಗಸುಖವನು ಲೆಕ್ಕಿಸದೆ, ಮುನಿ
ಪುಂಗವನೆ ಪರದೈವವೆನುತಲಿ ತಿಳಿದು ಭಾವದಲಿ।
ಕಂಗೆಡದೆ ಸೇವಿಸುತಲಿರ್ದಳು
ಮಂಗಳಾಂಗಿ ಸುಕನ್ಯೆ ಕರುಣಾ-
ಪಾಂಗ ಮಾಗುಡಿರಂಗ ಗರುಡತುರಂಗ[1] ನೊಲವಿಂದ ॥ ೩೪ ॥

---

# ಮೂರನೆಯ ಸಂಧಿ.

**ಸೂ॥** ಬಂದು ಕಾಮಿಸೆ ಸತಿಯನಶ್ವಿನಿ
ನಂದನರು ಖತಿಗೊಳಲು ಸತಿತಾ
ನಂದು ಧರೆಯ[2]ವನಿತ್ತು ಕಣ್ಗೊಟ್ಟರು ಮುನೀಶ್ವರಗೆ ॥

ಕೇಳು ಧರ್ಮಜ, ಪತಿಯ ಸೇವಿಸು
ತಾ ಲಲನೆ ವರ್ತಿಸುತಲಿರ್ದಳು
ಶೀಲದೊಳಗೆಣೆಯಿಲ್ಲ ಮಿಾಕೆಗೆನುತ್ತ ಪೊಗಳೆ ಜನ।
ಮೇಲೆ ಬಂದುದದೊಂದು ಸಂಕಟ
ಪೇಳಲೇಂ ಸೌಂದರ್ಯವೇ ಪಗೆ
ಬಾಲೆಯರಿಗೀ ಜಗದಿ ಕಾಮಿಸದಿಹರೆ ಸುಂದರಿಯ? ॥ ೧ ॥

ಒಂದು ದಿನ ಕೆರೆಯಲಿ ಸುಕನ್ಯೆಯು
ಮಿಂದು[3] ಮಡಿಯುಟ್ಟೈತರುತ್ತಿರೆ
ಬಂದರಲ್ಲಿಗೆ ದೇವವೈದ್ಯರು ಸೂರ್ಯಸಂಭವರು[4]।
ಸುಂದರಾಂಗಿಯ ರೂಪವೈಭವ

---

1 ಗರುಡವಾಹನವುಳ್ಳವನು. 2 ಪ್ರಾಯ. 3 ಸ್ನಾನಮಾಡಿ. 4 ಅಶ್ವಿನಿದೇವತೆಗಳು.

ದಂದವನು ಪರಿಕಿಸುತಲಲ್ಲಿಯೆ[1]
ನಿಂದು ನುಡಿಸಿದರವಳ ನೊಳ್ನುಡಿಯಿಂದ[2] ಹರುಷದಲಿ ‖ ೨ ‖
ನಿಲ್ಲಬಲೆ! ನೀನಾರು? ಕಾಮನ—[3]
ವಲ್ಲಭೆಯೊ? ಮೋಹಿನಿಯೊ? ಶಚಿಯೋ?[4]
ಸಲ್ಲಲಿತಲಾವಣ್ಯವಾರ್ಧಿಯೆ![5] ನಿನಗೆ ಮನಸೋತು ।
ಫುಲ್ಲಶರ[6]ಬಾಧೆಯಲಿ ಸಿಲ್ಕಿಯೆ
ನಿಲ್ಲಲಾರೆವು ಕರುಣೆ ತೋರಿಸಿ
ಮೆಲ್ಲುಲಿ[7]ಯ ನುಡಿಯೆಂದು ಬೇಡಿದರಶ್ವಿನೀಸುತರು ‖ ೩ ‖
ನಿನ್ನ ಪಡೆದವರಾರು? ಪೆಸರೇಂ?
ಸನ್ನುತೆಯೆ! ಸುಕುಮಾರದೇಹವ
ನನ್ನಿ[8]ಯಿಂ ಪೋಷಿಸದೆ ತಣ್ಣೀರೊಳು ಮುಳುಂಗುತಿಹೆ ।
ನಿನ್ನತಳಿರಡಿ ಮುಳ್ಳತಡೆವುದೆ
ಚೆನ್ನೆ! ಸೋತೆವು ನಿನ್ನ ರೂಪಕೆ
ಮನ್ನಿಸೆಮ್ಮನು ಜಡುವೆ ವೆಳಸಿದುವೆಲ್ಲವನು, ನಿನಗೆ ‖ ೪ ‖
ದೇವವೈದ್ಯರು ನಾವುಸ್ವೇಚ್ಛೆಯೊ—
ಳೀವನದಿ ತಿರುಗುತಲಿ ಬಂದೆವು,
ಭೂಪಿನುತ ಸೌಂದರ್ಯವೀಕ್ಷಿಸಿ ನಿಂದೆವೀಗಿಲ್ಲಿ ।
ತೀವಿದೆಳಜವ್ವನ[9]ದಿ ಮೆರೆಯುವ
ಭಾವೆ, ನಿನ್ನಯ ವಿವರವೆಲ್ಲವ
ನೋವಿ ತಿಳುಹೆಂದೆನುತ ಬೇಡಿದರಾ ಸತೀಮಣಿಯ ‖ ೫ ‖
ಎನಲು ನಾಚುತೆ ತಲೆಯ ಬಾಗಿಸಿ,

---

1 ನೋಡುತ್ತ. 2 ಒಳ್ಳೇಮಾತು. 3 ರತಿದೇವಿ. 4 ಇಂದ್ರನ ಹೆಂಡತಿ. 5 ಸೌಂದರ್ಯಕ್ಕೆ ಸಮುದ್ರ ಪ್ರಾಯಳು. 6 ಮನ್ಮಥ. 7 ಮೃದುವಾಕ್ಯ. 8 ನಿಜವಾಗಿ (ಪ್ರೀತಿಯಿಂದ). 9 ಪ್ರಾಯ (ಯೌವನ).

ವನಿತೆ ನುಡಿದಳು ದೇವವೈದ್ಯರೆ!
ಜನಪ ಶರ್ಯಾತಿಯ ಕುಮಾರಿಸುಕನ್ಯೆಯೆನ್ನಾಖ್ಯೆ[1] |
ಮುನಿಪ ಚ್ಯವನನ ಸತಿಯೆನಿಪೆ ನಾಂ
ವಿನಯದಲಿ ಪತಿಸೇವೆಗೆಯ್ವುತೆ
ಸನಿಹದೊಳಗಿರುತಿರ್ಪೆನೆಮ್ಮಾಶ್ರಮವದಿಲ್ಲಿಹುದು ‖ ೬ ‖
ಪತಿ ಮುದುಪ[2]ನಂಧಕನು, ನೀಂ ಬಂ
ದತಿಥಿಸತ್ಕಾರವನು ಕೊಳ್ಳಿರಿ,
ಹಿತವ ಪೇಳಿರಿ ತಾನಬಲೆ ಪೆರರುಪಚರಿಪರಿಲ್ಲ |
ಇತರ ಚಿಂತೆಗಳೆನಗೆ ಸಲ್ಲವು,
ಪತಿಸಮಕ್ಷ[3]ದೊಳಿಲ್ಲದಿರ್ಪಾ
ಸತಿಯ ಮಾತಾಡಿಸಲು ಸಲ್ಲದು, ಕೇಳಕದಿರಿ, ನನ್ನ ‖ ೭ ‖
ಸುಂದರಿಯೆ! ಪತಿಯಂಧನೆನ್ನುವೆ |
ಯಂದವಿಲ್ಲದ ಮುದುಪನವನು, ವ
ಸುಂ[4]ದರೇಶನ ಪುತ್ರಿ ವರಿಪುದು ನ್ಯಾಯವೇನವನ |
ತಿಂದು ಭಕ್ಷ್ಯವ ಹಂಸತೂ[5]ಲದೊ
ಳಂದದಿಂ ಪವಡಿ[6]ಸುವ ನಿನಗಿದು
ಚಂದವೇ ಗೆಣಸು[7]ಗಳ ತಿಂದೊರಗುವುದು ಪುಲ್ಲಿ[8]ಲ್ಲಿ ‖ ೮ ‖
ನರ ಜನುಮ ದುರ್ಲಭವು ಮೇಣಾ
ದೊರೆಯ ಮಗಳೆನಿಸುವುದು ಪಿರಿದದ
ಪರಿ[9]ಗಣಿಸದೀ ಕಾಡೊಳೊಬ್ಬಳೆ ತ್ಯಜಿಸಿ ಸುಖಗಳನು |
ಕುರುಡನೊಡನಿರ್ದವನ ಪೊರೆವುತ

---

1 ನನ್ನ ಹೆಸರು. 2 ವೃದ್ಧ. 3 ಎದುರಿಗೆ. 4 ರಾಜನ. 5 ಹಂಸಪಕ್ಷಿಗಳಪುಡಿರೆಕ್ಕೆಯ ಹಾಸಿಗೆ. 6 ಮಲಗುವ 7 ಗೆಡ್ಡೆಗೆಣಸುಗಳನ್ನು 8 ಹುಲ್ಲಿನ ಮೇಲೆ. 9 ಲಕ್ಷ್ಯಮಾಡದೆ.

ಹರೆಯುವನು ನೀಂ ವ್ಯರ್ಥಗೊಳಿಸಿಯೆ
ಕೊರಗುವುದು ಸಲ್ಲುವುದೆ, ನಿನಗೆಲೆ ನಾರಿ, ಸುಕುಮಾರಿ? ‖ ೯ ‖
ಪಾತಕಿಯು ಶರ್ಯಾತಿ, ಕುರುಡಗೆ
ನೀತಿದಪ್ಪಿಯೆ ತನ್ನ ಕುವರಿಯು
ನೋಕು[1]ಕೊಟ್ಟನು, ವಾನರ[2]ಗೆ ಪೂಮಾಲೆಯಿತ್ತಂತೆ।
ಮಾತೆಯೆಂತೊಪ್ಪಿದಳು? ಸಖಿಯರು
ಮಾತನಾಡದೆ ಪೋದರೇ? ವಿಧಿ
ಯೇತಕೀಸಂಬಂಧವನು ಗೊಳಿಸಿದನು ನಿರ್ಘೃಣ[3]ನು ‖ ೧೦ ‖
ವರಿಸು ನನ್ನೊಳಗೊರ್ವನನು ನೀ,
ನರಮುಗಳೆ ದಿವ್ಯೋಪಭೋಗದಿ
ಬೆರೆದು ನಂದನದಲ್ಲಿ ವಿಹರಿಸಿ ವ್ಯೋಮಯಾ[4]ನದೊಳು।
ಚರಿಸುತಮೃತವ ಕುಡಿದು ಸೊಗದಿಂ
ದಿರು, ಜನುಮ ಸಾರ್ಥಕವೆನಿಪ್ಪುದು
ಸುರತರುಣಿಯಂದದೊಳು ಬಾಳುವೆ ಯೆಂದರಾ[5]ಶ್ವಿನರು ‖ ೧೧ ‖
ಎಲೆ ಸುಕನ್ಯೆಯೆ, ಜಗದಿ ಕಾಮುವ
ಗೆಲಲಹುದೆ? ಬಯಕೆಗಳ ನುಳಿದೀ
ಹಳುವ[6]ದಲಿ ನೀನಿಹುದು ಸಲ್ಲದು, ನಮ್ಮನುಡಿಕೇಳು।
ಬಲವಿನಿಂ ವರಿಸೀಗಳೆಮ್ಮನು
ಸುಲಲಿತದ ಸೊಗಮಾಳು, ನಡೆಯೆನ
ಲಲಘು[7]ಮತಿಯಾ ಸತಿಯುಸಿರ್ದಳವರ್ಗೆ ವಿನಯದಲಿ ‖ ೧೨ ‖
ಆಶ್ವಿನೇಯರೆ! ನೀಂಗಳಾ ಹರಿ[8]
ದಶ್ವಸಂಭವರಿಂತು ನುಡಿವರೆ?

---

1 ಪ್ರೀತಿಸಿ. 2 ಕಪಿಗೆ. 3 ನಿಷ್ಕರುಣಿ. 4 ವಿಮಾನ. 5 ಅಶ್ವಿನೀ ದೇವತೆಗಳು. 6 ಕಾಡಿನಲ್ಲಿ. 7 ತೀಕ್ಷ್ಣಬುದ್ಧಿಯುಳ್ಳವಳು. 8 ಸೂರ್ಯಪುತ್ರರು.

ಶಾಶ್ವತವೆ? ಸಂಸೃತಿಯು[1] ಹರೆಯವು ವೈಸಿರಿಯ ಸೊಗಸುಂ।
ನಶ್ವರಂಗಳು[2], ಸತ್ಯವೊಂದೇ
ವಿಶ್ವದೊಳು ಸ್ಥಿರವೆನಿಸಿ ತೋರುವು
ದೀಶ್ವರನು ಮೆಚ್ಚುವನೆ? ದುಶ್ಶೀಲಂಗಳನು ಜಗದಿ ॥ ೧೩ ॥
  ಕುಟಿಲನಕ್ಕೆ, ಕುರೂಪಿಯಾಗುಗೆ
ಜಟಿಲನಕ್ಕೆ[3], ಮಹಾಂಧನಕ್ಕೆ, ಕ
ಪಟಮನುಳಿದವನೇ ಪರಾತ್ಪರನೆಂದು ಭಾವಿಸುತ।
ದಿಟದೆ ಸೇವಿಸಬೇಕು ಸತಿಯರು,
ಸಟೆಯೆನಿಸದಿದು ದೇವವೈದ್ಯರೆ 037217
ಕಟಕಟಾ! ಇಂತಪ್ಪನುಡಿಯನು ಪೇಳುವರೆ ನೀವು? ॥ ೧೪ ॥
  ಮುನಿಪಸತಿ ನಾನಿನಿಯನುಳಿದ
ನ್ಯನನು ಕಾಮಿಸೆನೆಂದುವುಂ ನಾಂ
ಜನಕಕುಲಕಪಕೀರ್ತಿ ತಾರೆನು ತೊಲಗಿ ನೀವೀಗ।
ಅನಯದಿಂ[4] ಪೊಲ್ಲಮೆಯ[5] ನುಡಿದೊಡೆ
ಘನತರದ ಶಾಪವನು ಕೊಡುವೆನು,
ಸನಿಹದೊಳು[6] ನಿಲ್ಲದೆಯೆ ಪೋಗಿರೆನುತ ತಿರುಗಿದಳು ॥ ೧೫ ॥
  ಅವರು ಕೇಳ್ದೀ ಮಾತನುರು ಶಾ
ಪವನು ಕುಡುವಳೆನುತ್ತ ಲಂಜಿಯೆ
ವಿನಯದಲಿ ಪೇಳಿದರು ದೃಢ ನಿಶ್ಚಯಕೆ ಮೆಚ್ಚಿದೆವು।
ಯುವತಿ, ಬಿನದಕೆ[7] ನುಡಿದ ಮಾತನು
ಗಮನಿಸದಿರೌ[8] ನಿನ್ನ ಶೀಲದ
ಪವಣತಿಳಿವೊಡೆ[9] ಬಂದೆವೆಂದರು ನಗುತಲಾಶ್ವಿನರು ॥ ೧೬ ॥

---

1 ಸಂಸಾರ. 2 ಸ್ಥಿರವಲ್ಲ. 3 ಜಡೆಬಿಟ್ಟರುವವನು. 4 ನೀತಿತಪ್ಪಿ. 5 ಕೆಟ್ಟಮಾತನ್ನು.
6 ಸಮೀಪ. 7 ವಿನೋದಕ್ಕೆ. 8 ಗಮನಿಸದೆ. 9 ಪ್ರಮಾಣವನ್ನು.

ದೇವವೈದ್ಯರು ನಾವು, ಜನರಿಗೆ
ತೀವಿದೊಳ್ಜವ್ವನವ ನೀವೆವು,
ಭಾವಿಸಲು ವೃದ್ಧರಿಗೆ, ಕುರುಡರಿಗೀವೆವಕ್ಷಿಗಳ[1]
[2]ಭಾವೆ! ವರವನು ಬೇಡು, ನಿನ್ನಯ
ಭಾವದೊಳು ಪೆರತೊಂದನೆಣಿಸದೆ,
ನಾವು ಜವ್ವನವಿತ್ತು ಕಣ್ಗಳ ಕುಡುತಿಹೆವು ಪತಿಗೆ ॥ ೧೭ ॥

ಎಮ್ಮವೊಲ್ ಸುಕುಮಾರನಾಗಲು
ಸಮ್ಮತಿಸು, ನಾಥನನು ಗುಣಸಂ
ಪನ್ನೆ! ತರುವಾಯದಲಿ ಮೂವರೊಳೊಬ್ಬನನು ವರಿಸು।
ನಮ್ಮನುಡಿ ಪುಸಿಯಲ್ತು ಸತಿನೀ
ನುಮ್ಮಳ[3]ಂಗೊಳದುಸಿರು ಯೋಚಿಸಿ
ಯೊಮ್ಮನುಡಿಯೆಂದಶ್ವಿನೀ ಸುತರೆಂದರಕ್ಕರೊ[4]ಳು ॥ ೧೮ ॥

ಬಂದಳಬಲೆ, ಮುನೀಂದ್ರನಲ್ಲಿಗೆ
ನಿಂದು ವೈದ್ಯರು ಪೇಳ್ದುದನು ಸಾ
ನಂದದಿಂ ಬಿನ್ನವಿಸಿ ಕಪಟಮುನರಿವುದರಿದೀಗ।
ಮುಂದು ತೋರದು, ತಮ್ಮ ಚಿತ್ತಕೆ
ಬಂದವೊಲು ಬೆಸಸು[5]ವುದು, ತಾನುರೆ
ಮಂದಮತಿಯಾಗಿರ್ಪೆ ನೆಂದೆರಗಿದಳು ಚರಣದೊಳು ॥ ೧೯ ॥

ಬೆದರಬೇಡೆಲೆ ತರುಣಿಯ[6]ವದಿರ
ಮುದದಿನಿಲ್ಲಿಗೆ ಕರೆದುತರ್ಪುದು
ತ್ರಿ[7]ದಶರಭಿಮತ ತಿಳಿವೆನೆನಲು ಸುಕನ್ಯೆ ಕೈಮುಗಿದು।

---

1 ಕಣ್ಣುಗಳನ್ನು. 2 ಸ್ತ್ರೀಯೆ. 3 ಚಿಂತೆಪಡದೆ. 4 ಪ್ರೀತಿಯಿಂದ. 5 ಅಪ್ಪಣೆಕೊಡುವುದು. 6 ಅವರನ್ನು. 7 ದೇವತೆಗಳ.

ಕನ್ನಡ ವಿಶ್ವವಿದ್ಯಾಲಯ [illegible]
ಗ್ರಂಥಾಲಯ.

ಸದಯ[1]ಕೇಳ್ ಸಮರೂಪನಾಗಿಸಿ
ಪದುಳದಿಂ ವರಿಸೆನಲು ಮೂವರೊ
ಳಿದುವೆ ಕಪಟವೆನುತ್ತ ತಿಳಿಯಲುಬಹುದೆಮರುಳಹೆನು ‖ ೨೦ ‖

ಎನಲು, ಚಿಂತಿಸಬೇಡ ಪತಿ ತಾಂ
ಸನುಮತಿಪನೆಂದವರನಿಲ್ಲಿಗೆ
ವಿನಯದಿಂದೊಡಗೊಂಡು ಬಾರ[2]! ಮರಾಳಿಕಾಗಮನೆ[3] |
ಘನದ ಪಾತಿವ್ರತ್ಯ ಕೆಡರ[4]ೊಂ-
ದಿನಿಸುವೊದಗದು ಪೋಗೆನುತಲಾ
ಮುನಿ ನುಡಿಯೆ ಭರದಿಂದ ಬಂದಿಂತೆಂದಳವದಿರಿಗೆ ‖ ೨೧ ‖

ದೇವಭಿಷಜರೆ[5]! ನೀವು ಪೇಳ್ದಾ
ಭಾವವಂ ಸಮ್ಮತಿಸಿ ಬೆಸಸಿದ,
ದೇವತೆಗಳನು ಕರೆದು ತಾರೆಂದೆನ್ನೊಳಾ ಪತಿಯು |
ಮೂವರೊಳಗೋರ್ವನನು ವರಿಸುವೆ;
ನೀವು ಬಿಜಯಂಗೆಯ್ವುದೆನಲವ
ರಾವನಿತೆಯೊಡಗೊಂಡು ಬಂದರು, ಮುನಿಪನಿದ್ದೆಡೆಗೆ ‖ ೨೨ ‖

ಕೊಳದ ಬಳಿಗೈತಂದು ಮುನಿಪನ
ಮುಳುಗೆನುತ್ತುಸುರಿದರು, ತಾವುಂ
ಮುಳುಗಿಬಂದರು, ನೀರೊಳಾ ಬಳಿಕವರು ಮೂವರು ಮುಂ |
ತೊಳಗುತಿಹ ಸಮರೂಪವಂ ಪಡೆ
ದೆಳೆ ಸತಿಯೆ! ನೀನಾವನನು ಕೈ-
ಕೊಳುವೆಯೋ[6] ಮೆಚ್ಚಿದನವರಿಸುವುದೆಂದು ಪೇಳಿದರು ‖ ೨೩ ‖

---

1 ದಯೆಯುಳ್ಳವನೇ. 2 ಬಾರಮ್ಮಾ. 3 ಹಂಸದಂತೆ ನಡೆಯುವಳು. 4 ವಿಘ್ನ.
5 ದೇವವೈದ್ಯ. 6 ಅಂಗೀಕರಿಸುವೆ.

ತಿಳಿಯಲರಿಯದೆ ಪತಿಯ ಮೂವರೊ-
ಳಳಲಿ ಮನದೊಳಗೀಗಳೇವೆನು,
ತೊಳಗುತಿಹರೀ ಮೂವರುಂ ಹರೆಯದಲಿ ರೂಪಿನಲಿ |
[1]ಕಳೆಗಳಲಿ ಸರಿಯೆನಿಸಿ ನೋಳ್ಪೊಡೆ
ತಿಳಿವುದೆಂತುಟು? ಬಲ್ಲರಾರಿವ
[2]ರಳವ ಪರಿಕಿಪುದೆಂತು [3]ಮುಗುದೆ, ಯೆನುತ್ತೆ ಚಿಂತಿಸುತ ‖ ೨೪ ‖

ಮನದಿ ನುತಿಸಿದಳಾಗ [4]ಕಾತ್ಯಾ-
ಯನಿಯು, [5]ನಘುವಾರಿಣಿಯು, ನಾರಾ-
ಯಣಿಯು, [6]ಭವದೂರಿಣಿಯು, ನಾಸತಿ ತ್ರಿಪುರಸುಂದರಿಯು |
ಎನಗೆ ಗತಿಯೇನಿವರೊಳಾವನು
ಮುನಿಪನಾರಾ ದೇವವೈದ್ಯರು?
ಘನದ ಶೀಲಕೆ ಭಂಗಬಾರದ ತೆರದಿ ಸಲಹಂಬೇ! ‖ ೨೫ ‖

ನಮಿಪೆ, ಕಾಯೆಲೆ, ತಾಯೆ! [7]ಶೂಲಿಯ
ರಮಣಿ! ದಾಕ್ಷಾಯಣಿಯೆ! [8]ಶಾಂಭವಿ,
ವಿಮಲಮೂರ್ತಿ, ವಿಶಾಲಲೋಚನೆ, ವಿಷ್ಣುಸೋದರಿಯೆ |
ಅಮರವಂದಿತೆ, ದುರ್ಗೆ, ಭೈರವಿ,
ಹಿಮಗಿರಿಯ ಸುಕುಮಾರಿಯೆನಗೆ ವಿ-
ಷಮದಕಾಲವು ಬಂದಿಹುದು ಸಲಹೆನುತ ನುತಿಸಿದಳು ‖ ೨೬ ‖

ಬಲ್ಲೆ ಯೆಲ್ಲವ ನೀನು, ಶಂಕರ-
ವಲ್ಲಭೆಯೆ, ತನ್ನಲ್ಲಿ ದೋಷವ-
ದೆಳ್ಳನಿತು ಮಿಲ್ಲದೊಡೆ ತಾಂ ಪತಿಭಕ್ತಿ ತಪ್ಪದೆಯೆ |

---

1 ವಿದ್ಯೆಗಳಲ್ಲಿ. 2 ಶಕ್ತಿಯನ್ನು. 3 ಮುಗ್ಧೆ. 4 ಪಾರ್ವತಿ. 5 ಪಾಪಪರಿಹಾರ ಮಾಡುವವಳು. 6 ಜನ್ಮವಿಲ್ಲದವಳು. 7 ಈಶ್ವರನ ಹೆಂಡತಿ. 8 ಶಿವಪತ್ನಿ.

ಸಲ್ಲಲಿತ ವರ್ತನದಿ ನಿರ್ಪುದು
ಸುಳ್ಳೆನಿಸದಿರೆ ಕೃಪೆಯಿನೀಗಳೆ
ಸೊಲ್ಲಿಸೀ[1] ಮೂವರೊಳು ಮುನಿಪತಿ ಯಾವನೆಂದೆನುತ ॥ ೨೭ ॥
ಸಂಚರಿಪೆ, ಲೋಕಂಗಳೊಳು ನೀಂ,
ಚಂಚರೀಕಾಳಕೆಯೆ![2] ನಂಬಿದೆ
ಮಿಂಚಿಹುದು ತಾನಿಲ್ಲ, ನಿನ್ನಯ ಶಕ್ತಿಗೀ ಜಗದಿ ।
ಚಂಚಲೆಯು ತಾನಲ್ಲದಿದೊಡೆ,
ವಂಚನೆಯು ತನ್ನಲ್ಲಿ ಯಿರದೊಡೆ,
ಮುಂಚಿತೋರೌ[3] ದಿವ್ಯದೃಷ್ಟಿಯನೆಂದು ಬೇಡಿದಳು ॥ ೨೮ ॥
ಗಿರಿಜೆಯಾಗ ಪ್ರಸನ್ನೆಯಾಗಿಯೆ,
ಕರುಣಿಸಿದಳಾ ದಿವ್ಯಮತಿಯನು,
ತರುಣಿ ಕಂಡಳು ದೇವಮಾನವ ಭೇದವನು ಬೞಕ ।
ಧರಿಸಿರುವ ಪೂಮಾಲೆ ಬಾಡದೆ,
ಧರೆಯೊಳಡಿಯಿಡದೆ[4]ಸೆ[5]ಯ ಹಾಯ್ಕದೆ
ಯಿರುತಿಹರೆ ಸುರರೆಂದು ತಿಳಿದಳು ಮೂವರೊಳಗಾಗ ॥ ೨೯ ॥
ವನಿತೆ ವರಿಸಿದಳಾಗ ನರರೂ-
ಪಿನಲಿ ಮೆರೆವ ಮುನೀಶ್ವರನ ನಾ
ಘನಮಹಿಮರಾತಂಕೆ ವಂದಿಸಿ ತೆರಳ್ವೆವೆಂದೆನಲು ।
ಮುನಿಪನೆಂದನವರ್ಗೆ ಮುದದಿಂ
ದೆನಗೆ ಹರೆಯುವನಿತ್ತು ಕಣ್ಗೊ[6]-
ಟ್ಟನಘರಿರ! ನಿಮ್ಮುಪಕೃತಿಗೆ ಪ್ರ[7]ತಿಯೇನನೆಸಗುವೆನು ॥ ೩೦ ॥
ವರವನೀವೆನು, ನಿಮಗೆ ಬೇಡಿದ

---

1 ಹೇಳಿ. 2 ಭೃಂಗದಂತೆ ಮುಂಗುರುಳುಳ್ಳವಳು. 3 ಮುಂದಾಗಿ. 4 ಭೂಮಿಯಲ್ಲಿ 5 ರೆಪ್ಪೆಯನ್ನು. 6 ನೇತ್ರಗಳನ್ನು ಕರುಣಿಸಿ. 7 ಬದಲಾಗಿ.

ಪರಿಯೊಳಂತಹ ಕಜ್ಜ[1]ವಿರ್ದೊಡ
ಮೊ[2]ರೆಯಿರಿದುವೆಯಸಾಧ್ಯವೆನುತಲಿ ಚಿಂತಿಸದೆ ನೀವು ।
ಒರೆಯಿರೆನ್ನಯ ತಪದ ಬಲದಿಂ
ಭರದಿ ನೊಡರಿಪೆನೆನುತ ಪೇಳಲು
ಚರಣಕಾನತರಾಗಿ ನುಡಿದರು ತಮ್ಮ ಕಷ್ಟಗಳ ॥ ೩೧ ॥
ಪಿತನನುಗ್ರಹದಿಂದ ಸುಖಸಂ-
ತತಿಗೆ ಕುಂದೊಂದಿಲ್ಲ ವೆಮಗವ
ಮಾತಿಯು ಬಂದಿಹುದೊಂದು ನೆವದಲಿ ಮುನ್ನಪು[3]ರುಹೂತಂ ।
[4]ಖತಿಯೊಳೆಮ್ಮಯ ಸೋಮಪಾನವ
[5]ಕ್ರತುಮುಖದಿ ತಪ್ಪಿಸಿದನಂದಿಂ-
ದಿತರರಂದದಿ ಸಲದೆ ಸಿಂದಿದೆ ಕುಡಿಸು ನಮಗದನು ॥ ೩೨ ॥
ಹೇ[6]ಮಗಿರಿಯಲಿ ಬೊ[7]ಮ್ಮನೆಸಗಿದ
ಹೋಮದಲಿ ತಪ್ಪಿಸಿದನಿಂದ್ರನು
ಸೋಮಪಾನವನೆಮಗೆ ವೈದ್ಯರನರ್ಹರಿವರೆಂದು ।
ಸೋಮರಸತುಂಬಿರ್ದ ಚ[8]ಮಸವ-
ನಾ[9]ಮಖದೊಳೆಮ್ಮಿಂದ ಸುಲಿದನು,
ಮೈ[10]ಮೆಯಿಂ ನೀಂ ಕುಡಿಸಬಲ್ಲೊಡನುಗ್ರಹಿಸು ನಮಗೆ ॥ ೩೩ ॥
ಕುಲದ ಕೊರತೆಯುದಿಲ್ಲ ನಮಗಾ
ಬಲದೊಳಂ ಕುಂದಿಲ್ಲವಿಂದ್ರನು
ಚಲದಿ ತಾಂ ತಪ್ಪಿಸಿದ ನಿದುವೆ ತಿರಸ್ಕೃತಿಯು ನಮಗೆ ।

---

1 ಕಾರ್ಯವು. 2 ಹೇಳಿರಿ. 3 ಇಂದ್ರ. 4 ಕೋಪ. 5 ಯಜ್ಞ. 6 ಮೇರು ಪರ್ವತ. 7 ಬ್ರಹ್ಮ. 8 ಒಂದುಬಗೆಯು ಪಾತ್ರೆ (ಸೌಟು). 9 ಯಜ್ಞ. 10 ಮಹಿಮೆ (ತ್ರಪ).

ಎಲೆ ಮುನಿಪ! ನೀನಾರ್ಪೊಡಿದನನು-
ಗೊಳಿಸು ನಮ್ಮ[1]ವಮತಿಯ ತಪ್ಪಿಸು
ಸಲಹೆನುತಲೆರಗಿದರು ಚ್ಯವನನಚರಣ ಸೀಮೆಯಲಿ ‖ ೩೪ ‖
ಆಗಲದ ನಾಲಿಸುತ ಮುನಿಪತಿ,
ಯೋಗದೃಷ್ಟಿಯೊಳೀಕ್ಷಿಸುತ್ತೆ ಸ-
ರಾಗದಲಿ ಪೇಳಿದನು. ದಿವಿಜರೆ[2]! ನಿಮ್ಮ ದಯೆಯಿಂದ |
ನೀಗಿತಂಥತೆ, ಸುಂದರಾಂಗದೊ-
ಳೀಗ ಮೆರೆವೆನು, ನಿಮಗೆ ಪಾನವ
ಯಾಗದೊಳು ಕುಡಿಸುವೆನು, ತಪ್ಪದೆ ತಪದ ಬಲದಿಂದ ‖ ೩೫ ‖
ಸುಲಭವೆನಿಸದು, ಬಹಳ ದಿನದಿಂ
ಸಲದೆ ತಪ್ಪಿಹುದೀಗ ವೈರವ
ಬಲಿದು ಬಲವೈರಿಯೊಳು ಪಡೆವುದು, ನಿಮ್ಮ ಭಾಗವನು |
ಸಲುಗೆಯಿಂದೀಯದೊಡೆ ಕುಡಿಸುವೆ
ಚಲದಿ ಮಾವನ ಕೈಯ ಯಾಗವ
ಬಲಿಸಿ ತನ್ನಯ ಮೈಮೆ ತೋರುವೆ ತೆರಳಿನೀವೆಂದ ‖ ೩೬ ‖
ಹರುಷದಿಂ ಸುರವೈದ್ಯರಮರರ
ಪುರಿಗೆ ಸರಿದರು ಬಳಿಕಲಿತ್ತಲು,
ಹರೆಯದಿಂ ಮೆರೆವಿನಿಯನೊಡನೆ ಸುಕನ್ಯೆ ಮುದದಿಂದ |
ಪರಿಪರಿಯ ಭೋಗದೊಳು ವಿಹರಿಸು-
ತಿರಲು ಮುನಿಪತಿ ಸುಖದೊಳಿರ್ದನು,
ಸಿರಿಯೆರೆಯ ಮಾಗುಡಿಯ ರಂಗನ ಕರುಣೆಯಿಂ ಬನದಿ ‖ ೩೭ ‖

---

1 ಅವಮಾನಕ್ಕೆ. 2 ದೇವತೆಗಳು.

# ನಾಲ್ಕನೆಯ ಸಂಧಿ.

**ಸೂ॥** ಸುತೆಯ ನೋಡಲು ಬಂದ ಧರಣೀ-
ಪತಿಯಳಿಯನನು ಕಂಡು ಚಿಂತಿಸೆ,
ಖತಿಯ ಬಿಡಿಸುತೆ ಪೇಳಿದನು ನಡೆದುದನು ವಿಸ್ತರದಿ ॥

ಕೇಳು ಧರ್ಮಜ, ಬನದೊಳಾಮುನಿ
ಶೀಲವಂತೆ ಸುಕನ್ಯೆಗೂಡಿಯೆ
ಲೀಲೆಯಿಂ ವಿಹರಿಸುತಲಿರ್ದನು ಹಲವು ದಿವಸಗಳ |
ಆ ಲಲನೆ[1], ಪತಿಯಾಜ್ಞೆಯಿಂದಲೆ
ಮೇಲೆನಿಪ ಭೋಗಗಳ ಪಡೆದನು-
ಕೂಲದಿಂದಿರುತಿರ್ದಳಲ್ಲಿ ಮಹಾ ವಿಭವದಿಂದ ॥ ೧ ॥

ಇತ್ತಲೀ ಪುರದೊಳಗೆ ಮನುಭೂ-
ಪೋತ್ತಮನ ಸತಿ ಸುತೆಯ ನೆನೆದಳ-
ಲುತ್ತ ಬಿನ್ನವಿಸಿದಳು ಪತಿಯನು ವಿನಯದಿಂದಾಗ |
ಮತ್ತಕಾಶಿನಿ[2] ಮಗಳನುಳಿದೆವು
ತತ್ತಪೋವನದಲ್ಲಿ ಹಸುಳೆಯೆ[3]
ನಿತ್ತು ಸಂಕಟಬಡುತಿಹಳೊ! ಮಾತಾಡಿಸುವರಾರು? ॥ ೨ ॥

ಪತಿಯ ನೋಡಿದೊಡಂಧಕನು! ನೆರೆ
ಹಿತವ ಪೇಳುವರಿಲ್ಲ, ಮುಣ್ಬೊಡೆ
ಗತಿಯದೆಲ್ಲಿಹುದುಡುಗೆ ತೊಡಿಗೆಗಳವಳಿಗೆಲ್ಲಿಹುವು? |
ಖತಿಯೊಳೆಮ್ಮನು ನಿಂದಿಸಳೆ? ಭೂ-
ಪತಿ ಮಗಳ ಮರೆದಿರ್ಪರೇ? ನೀ—
ವತಿಶಯದ ದುಃಖದಲಿ ಮುಳುಗಿದೆನವಳ ನೆನೆನೆನೆದು ॥ ೩ ॥

---

1 ಹೆಂಗಸು 2 ಹೆಂಗಸು. 3 ಮಗು.

ಬಾಲೆ, ಯಧಿಕ ಸುಶೀಲೆ, ಶಶಧರ[1]
ಫಾಲೆ, ಗುಣಮಣಿಮಾಲೆ, ಪತಿಗನು-
ಕೂಲೆ, ಸುರುಚಿರಲೀಲೆ, ಗಮನವಿನಿರ್ಜಿತಮರಾಳೆ[2] ।
ಪಾಲಕರು ತಾವಿಲ್ಲ! ತರಗಿನ[3]
ಶಾಲೆಯಲಿ ತಾನಿರ್ಪುದೆಂತುಟು?
ತಾಳಲಾರೆನು ಮಗಳ ನೋಡದೆ ನೊಂದಿಹುದು ಮನವು ॥ ೪ ॥

ಎನಲು ಕೇಳ್ದಾ ನೃಪತಿ ತಾನುಂ-
ಮನದಿ ಯೋಚಿಸಿ ಕರೆದುತಹೆನಾ
ತನುಜೆಯನು ಸಂತವಿರು ನೀನೆನುತಾಗಳೇ ತೆರಳಿ ।
ಘನ ತಪೋವನಕೈತರುತ ಯೌ-
ವನ ಪುರುಷನೊಡಗೂಡಿ ಮೆರೆವಾ
ವನಿತೆಯನು ಕಂಡಧಿಕರೋಷದಿ ಖಿನ್ನ[4] ಮನನಾದ ॥ ೫ ॥

ಏನಿದಚ್ಚರಿ! ದುರಳತನದಿಂ
ಮಾನಿನೀಮಣಿ ಪತಿಯ ಕೊಂದತಿ-
ಹೀನ ವೃತ್ತಿಗೆ ಸಂದಳೇ? ದುರ್ಯಶವು[5] ಬಂದುದಲಾ! ।
ಕ್ಷೋಣಿಯೊಳು[6] ತಾನೆಂತು ಸಹಿಸುವೆ?
ಭಾನು ಕುಲಕೆ ಕಳಂಕ[7] ವಡಸಿದು-
ದೇನಮಾಳ್ಪೆನು! ಮುಂದು ತೋರದೆನುತ್ತೆ ಚಿಂತಿಸಿದ ॥ ೬ ॥

ಧರಣಿಯೊಳು ಕಾಮನನು ಗೆಲುವೊಡೆ
ಹರಿಹರಾದಿಗಳಾರರೆಂದೆನೆ
ತರುಣಿಯರಮಗಳಿಲ್ಲ[8] ಶಿಕ್ಷಕರೋರ್ವಳೇ ಬನದಿ ।

---

1 ಚಂದ್ರನಂತೆ ಹಣೆಯುಳ್ಳವಳು. 2 ನಡಿಗೆಯಿಂದ ಹಂಸವನ್ನು ಗೆದ್ದವಳು 3 ಎಲೆಯಮನೆ. 4 ಖೇದಗೊಂಡ. 5 ಅಪಕೀರ್ತಿ. 6 ಭೂಮಿ. 7 ಕೊರತೆ. 8 ರಾಜಕುಮಾರಿ.

ಕುರುಡ ಮುದುಪನೆನುತ್ತ ಪತಿಯಂ
ಪರಿಹರಿಸಿ ಕಳೆದನ್ಯನೊಡಗೂ-
ಡಿರುವ ಮಗಳನು ಕೊಲ್ವೆನೇ! ಸ್ತ್ರೀಹತ್ಯ ಬಂದಪುದು ॥ ೭ ॥

ಚಿಂತಿಸದೆ ತಾನಿದನು ಮುನ್ನಮೆ
ಸಂತಳಿವಳೆನುತಿತ್ತೆ[1] ಮುನಿಪಗೆ
ಕಂತುತಾಪವ ತವಿಸಲಾರದೆ[2] ಕೊಂದಳಿನಿಯನನು ।
ಎಂತು ಸೈರಿಪೆನೀ ದುರಾತ್ಮಳ
ನಂತಕನ ಬಳಿಗಟ್ಟುವೆನೆ? ಮೇಣ್
ಪಂತಮುಳಿದಾನಾತ್ಮಘಾತದಿ[3] ಮಡಿವೆನೇ ಈಗ! ॥ ೮ ॥

ಪಿರಿದುಕಷ್ಟಕೆ ಸಿಲುಕುತೀಹರೀ-
ಧರಣಿಯೊಳು ಪೆಣ್ಮಕ್ಕಳದರಿಂ
ಕೊರಗುತಿರ್ಪರು, ತಂದೆತಾಯ್ಗಳು ಸುಖಮಿನಿಸುಮಿಲ್ಲ ।
ತರುಣಿಯುಳಿಗಜ್ಜಂಗಳೆಸಗಿಯೆ[4],
ದುರುಯಶವ[5] ಪಡೆಯಲ್ಕೆ ತಪ್ಪದು
ನರಳಮಿಂತಹ ಮಕ್ಕಳೇತಕೆ? ಸುಡುಸುಡೀಬಾಳ್ಕೆ! ॥ ೯ ॥

ಅಕಟಕಟ! ತಪ್ಪೆನತು ತನ್ನಯ
ಸುಖನಿಮಿತ್ತದಿ ಮಗಳನಂಧಗೆ
ಯುಕುತಿಯಿಲ್ಲದೆ ಕೊಟ್ಟೆನನುಭವಿಸುವುದು ತತ್ಫಲವ ।
ಅಕುಟಿಲರು[6] ಕನ್ನೆಯನು ಕುಡುವುದು
ಶಕುತಿಯಲಿ[7] ರೂಪಿನಲಿ ಹರೆಯದಿ
ಪ್ರಕಟದಿಂದನುರೂಪನೆನಿಪನ ನೋಡಿ ಈಜಗದಿ ॥ ೧೦ ॥

---

1 ಸದ್ಗುಣವುಳ್ಳವಳು. 2 ತಡೆಯಲಾರದೆ. 3 ತನ್ನನ್ನು ಕೊಂದುಕೊಳ್ಳುವುದರಿಂದ.
4 ಕೆಟ್ಟಕೆಲಸ. 5 ಅಪಕೀರ್ತಿ. 6 ಕಪಟವಿಲ್ಲದವರು. 7 ಶಕ್ತಿ.

ಬಂದು[1]ದಪಯಶ ವೀಗಲಿಳೆಯೊಳ-
ಗೆಂದು ಫಲವೇನಕಟ! ಕೊಲುವೆನೆ?
ಮಂದಮತಿಯಿಂದವಳ, ಪೆಣ್ಗಳ ಕೊಲುವುದೇ ಪಾಪ, ।
ಸುಂದರಿಯನೀ ಸುತೆಯ ನಿಹದೊಳು,
ಕೊಂದು ನಿರ[2]ಯದೆ ಬೀಳುವುದರಿಂ
ಮುಂದೆ ಸಾವುದು ಮೇಲು ತಾನೆನುತಿರ್ದನಾ ನೃಪತಿ ॥ ೧೧ ॥

ಅನಿತರೊಳಗೈತಂದು ಸುತೆಯಾ-
ತನ ಸಮೀಪಕೆ, ಚಿಂತಿಸುವ ಕಾ-
ರಣವನಿಂಗಿತದಿಂದಲೂಹಿಸಿ ಮಣಿ[3]ದುಪೇಳಿದಳು ।
ಮನದ ದುಗುಡವದೇನು ಜನಪನೆ?
ಮುನಿಪನಂಧತೆಯುಳಿದು ಸುಂದರ
ತನುವ[4]ನಾಂತಿಹುದಕ್ಕೆ ಸಂಶಯವಡಿಸಿದುದೆ? ಎನುತ ॥ ೧೨ ॥

ಪಿತನೆ! ಚಿಂತಿಸಬೇಡ, ಧರ್ಮ[5]-
ಚ್ಯುತೆಯು ತಾನಲ್ಲಲ್ಲ, ಸತ್ಯವು,
ಪತಿಯ ಬಳಿಗೈತಂದು ಬೇಗದಿ ತಿಳಿವುದೆಲ್ಲವನು ।
ಅತಿಶಯದಿ ನೆಗಳ್ದಿ[6]ರ್ಪ ವೈವ-
ಸ್ವತನ ವಂಶದೊಳುದಿಸಿ ನಾನವ
ಮತಿಯ ತರ್ಪನೆ! ಹೀನರಂದದಿ ತಿಳಿವೆಯಾ! ಎನ್ನ ॥ ೧೩ ॥

ಎನಲು ರೋಷದಿ ಘುಡಿಘುಡಿಸುತಾ
ಜನಪನೆಣ್ಣೆಯ ನುರಿಯೊ[7]ಳದ್ದವೊ
ಲಣುಗಿಯನು ನಿಟ್ಟಿ[8]ಸದೆ ಗರ್ಜಿಸಿ ನುಡಿದನಿಂತಾಗ ।

---

1 ಅಪಕೀರ್ತಿ. 2 ನರಕದಲ್ಲಿ. 3 ನಮಸ್ಕರಿಸಿ. 4 ಶರೀರವನ್ನು. 5 ಧರ್ಮ ಭ್ರಷ್ಟಳು. 6 ಖ್ಯಾತಿಗೊಂಡಿರುವ. 7 ಮುಳುಗಿಸಿದಹಾಗೆ. 8 ನೋಡದೆ.

ಮುನಿಪ ಚ್ಯವನನದೆಲ್ಲಿ? ಅಂಧಕ-
ನೆನುತೆ ಕೊಂದೆಯ! ಪಾಪಿ! ನಿನ್ನಯ
ತನುವ ಸಿಗಿದಾ ಭೂತಗಳಿಗುಣಬಡಿಸುವೆನು ಈಗ ॥ ೧೪ ॥

ಅಂಧನೆನುತಂ ಕೊಂದು ಪತಿಯನು,
ಸುಂದರಿಯೆ, ನೀನಂದಗಾರನ
ತಂದು ಮೋಹಿಸಿ ತಂದೆ, ಕುಲಕಪಕೀರ್ತಿಯನುಹಂದೆ![1] ।
ಇಂದು ನಾನ್ಯೈತಂದು ಫಲವೇ-
ನಿಂದು ಮಧ್ಯ ಕಳಂಕದಂದದಿ
ಬಂದೆ, ಕುಂದನು ತಂದೆ, ಸಾವುದದೊಂದೆ, ನಿನ್ನಿಂದೆ! ॥ ೧೫ ॥

ಎನೆ ನಗುತ ಕೈವಿಡಿದು ತಂದೆಯ,
ಮುನಿಪನಿದ್ದೆಡೆಗೊಯ್ದು ತೋರಿಸಿ,
ಜನಕ, ಕೊಂದೆನು ಪತಿಯನೆನುತಲಿ ಭಾವಿಸಿದೆ ನೀನು ।
ಘನಮಹಿಮರಾ ದೇವವೈದ್ಯರು
ಮನು[2]ಮಥನ ಸಮರೂಪನಾಗಿಸಿ
ಋನಿಯನನು ಕರುಣಿಸಿದರೆಂದು ಸುಕನ್ಯೆಯುಸಿರಿದಳು ॥ ೧೬ ॥

ಎನ್ನ ನುಡಿ ಪುಸಿಯಲ್ತು, ನಮಿಸೀ
ಸನ್ನುತಾಂಗಗೆ ತಾನೆ ನುಡಿವನು,
ಮುನ್ನ ನಡೆದುದನೆನಲು ನರಪತಿಯಾ ಮುನೀಂದ್ರಂಗೆ ।
ನನ್ನಿ[3]ಯಿಂ ಕೈಮುಗಿದು, ಭಾರ್ಗವ[4]!
ನಿನ್ನ ರೂಪವ ಕಂಡು ಸಂಶಯ
ವೆನ್ನ ಬಾಧಿಸುತಿಹುದು, ಬಿಡಿಸಿದನರುಹಿ ವಿಸ್ತರದಿ ॥ ೧೭ ॥

ಎಂದ ಶರ್ಯಾತಿಗೆ ನುಡಿದನುರು
ಮಂದ[5]ಹಾಸದಿ ಕೇಳು ನರಪತಿ!

---

1 ನೀಚಳೆ. 2 ಮನ್ಮಥ. 3 ಭಕ್ತಿಯಿಂದ. 4 ಚ್ಯವನಮುನಿಯೇ. 5 ಮುಗುಳುನಗೆ.

ಬಂದರಶ್ವಿನಿ ದೇವತೆಗಳೀ ವನಕೆ ಕೃಪೆಯಿಂದ ।
ಅಂಧತನವನು ಕಳೆದು ಹರೆಯುವ
ನಂದು ಕರುಣಿಸಿ ಕೊಟ್ಟರಿಂದ್ರನ
ಮುಂದೆ ಕುಡಿಸುವೆನೆಂದು ಪೇಳ್ದಿಹೆನವರ ಭಾಗವನು ॥ ೧೮ ॥

ನಿನ್ನಣುಗಿ ಗುಣವಂತೆ, ಬನದೊಳ-
ಗೆನ್ನ ನಂಧನೆನುತ್ತ ಸೆಡೆಯದೆ,[1]
ಮನ್ನಿಸಿದಳುರು ತಪಕೆ ವಿಷ್ಣುವು ಬಾರದಂದದಲಿ ।
ಚೆನ್ನೆ, ಈಕೆಯ ಮಹಿಮೆಯಿಂದನೆ
ಕಣ್ಣುಬಂದುದು, ಮುಪ್ಪಡಂಗಿದು
ದಿನ್ನಿವಳ ಚರಿತೆಯನು ಪಳಿಯದಿರೆಂದನಾ[2] ಮುನಿಪ ॥ ೧೯ ॥

ದೋಸ[3]ಮೊಳ್ಪನಿತಿಲ್ಲ ಸತಿಯೊಳು
ದೂಸರಿಲ್ಲ,[4] ವಿಚಾರಗೊಳದಿರು,
ವೋಸವಡಿಸಿದುದಿಲ್ಲವೆನುತಲಿ ಪೇಳ್ದ ಭೂಪತಿಯ ।
ಆಸನದಿ ಕುಳ್ಳಿರಿಸಿ ವಿಹಿತ ಕ-
ಥಾಸುಗೋಷ್ಠಿಯೊಳಿರ್ದು ನುಡಿದನು,
ವಾಸವನ[5] ಚೇಷ್ಟಿತವನದಕೆ ಪ್ರತಿಕ್ರಿಯೆಯನೆಲ್ಲ ॥ ೨೦ ॥

ಕ್ರತುವ ವಿರಚಿಸು ನೀನು, ಭೂಮೀ-
ಪತಿಯೆ! ಕುಡಿಸುವೆನಾಶ್ವಿನೇಯರಿ-
ಗತಿಹಿತದ ಪಾನವನು, ತಡೆಯಲು ಬಂದೊಡಿಂದ್ರನನು ।
ಗತಿಗೆಡಿಸಿ ಭಂಜಿಸುವೆ, ತೇಜದಿ
ಜತೆಗೊಳಿಸು, ಸಾಧನವ ಬೇಗದಿ
ಸುತನು ಜನಿಪನು ನಿನಗೆ ಲೇಸಹುದೆಂದನಾಮುನಿಪ ॥ ೨೧ ॥

---

1 ಬೇಸರಗೊಳ್ಳದೆ. 2 ನಿಂದಿಸದೆ. 3 ದೋಷವು. 4 ಅಪರಾಧವಿಲ್ಲ. 5 ಇಂದ್ರನ.

ಅದನು ಕೇಳ್ದು ಮಹೀಶನಾ ಮುನಿ-
ಪದಕೆರಗಿ ಬೇಡಿದನು, ಕ್ಷಮಿಸೈ
ಹದನನರಿಯದೆ ಜರಿದೆ ನಿಮ್ಮನು, ಮಗಳನಿಂದಿಸಿದೆ!! |
ಒದವಿಪೆನು ಸಾಧನವ ಕ್ರತುವಿಗೆ
ಮುದದಿ ಚಮಸವ ಕುಡಿಸು, ವೈದ್ಯರಿ-
ಗಿದಿರಹರು ನಿನಗಾರು ತೇಜಃಪುಂಜನಲೆ ನೀನು! || ೨೨ ||

ಎಂದು ನುತಿಸಿ ಯನುಜ್ಞೆ ವಡೆದಾ-
ನಂದನೆಯ ಸಂತವಿಸಿ[1] ತೆರಳಿದ-
ನಂದು ನಗರಿಗೆ ಸತಿಯೊಳುಸಿರ್ದನು ನಡೆದುದೆಲ್ಲವನು |
ಕುಂದದಿಹ ತನುಜೆಯ ಶುಭೋದಯ
ದಂದವನು ಕೇಳುತ್ತುಲತುಳಾ[2]
ನಂದಮಾನಸರಾದರಾ ರಾಣಿಯರು ಮಾಳಿಯರುಂ[3] || ೨೩ ||

ಕೇಳಿ ನಲಿದುದು[4] ಜನ, ಸುಕನ್ಯೆಯ
ಶೀಲವನು ಕೊಂಡಾಡುತಲಿ, ಭೂ-
ಪಾಲನಾ ಯಜ್ಞೋಪಕರಣವ ಸಿದ್ಧಗೊಳಿಸಿದನು |
ನಾಳೆಯೇ ಮುನಿಪತಿಯ ಸನಿಹಕೆ[5]
ಪೇಳಿ ಕಳುಹುವೆ ದೂತರನು, ಶ್ರೀ-
ಲೋಲ ಮಾಗುಡಿರಂಗ ನಿದನಾಗಿಸುವ ತಾನೆಂದ || ೨೪ ||

---

1 ಸಮಾಧಾನಪಡಿಸೆ. 2 ಅನುಮಾನದಿಂದ. 3 ಸಖಿಯರು. 4 ಸಂತೋಷಿಸಿದುದು. 5 ಸಮೀಪ.

# ಐದನೆಯ ಸಂಧಿ.

**ಸೂ** ॥ ಸೋಮಪಾನವ ದೇವವೈದ್ಯರಿ-
ಗಾ ಮಹಾಮುನಿ ಮಾಡಿಸುತ್ತ ಮ-
ಹಾ! ಮಹಿಮೆಯಿಂ ಕ್ರತುವನಾಗಿಸಿ ಸುಖದೊಳಿರುತಿರ್ದ ॥

ಜನಪ ಕೇಳ್ ಶರ್ಯಾತಿ ಬೂತರ
ಮುನಿಪನೀರ್ದೆಡೆಗಟ್ಟಿ ಯಾಗಲಿ
ಸನುಮತಿಸಿ ಕರಸಲ್ಕೆ ಬಂದನು ಸತಿಯೊಡನೆ ಚ್ಯವನ ।
ಅನಘ[1] ಶುಭಲಗ್ನದಲಿ ಕಟ್ಟಿಸಿ
ಘನದ ಮಖಶಾಲೆಯನು[2] ಜನ್ನಕೆ[3]
ಮುನಿ ವಸಿಷ್ಠಾದ್ಯರನು ಕರೆಸಲು ಬಂದರತಿಮುದದಿ ॥ ೧ ॥

ಸವನೆ[4] ವಾರಂಭಿಸಿದುದಾಗಳೆ
ದಿವಿಜರೆಲ್ಲರು ಬರಲಿಕವದಿರ[5]
ಸವನೆನಿಸುತಶ್ವಿನಿಯ[6] ಮಕ್ಕಳು ಬಂದರಾ ಮಖಕೆ ।
ಅವರ ನೀಕ್ಷಿಸಿ ಮುನಿಸಿನಿಂ ವಾ-
ಸವನು ನುಡಿದನು ದೇವವೈದ್ಯರಿ-
ಗವನಿಯೊಳ್ಕ್ರತುಗಳಲಿ ಪಾನವು ಸಲ್ಲದೆಂದೆನುತ ॥ ೨ ॥

ಉತ್ತರವ ಕುಡದಿರಲು ವೈದ್ಯರು,
ತತ್ತ್ವಪೋನಿಧಿ ನುಡಿದನೆಲೆ ದಿವಿ-
ಜೋತ್ತಮನೆ! ಕಣ್ಗೊಟ್ಟು ಹರೆಯುವನಿತ್ತರೆನಗಿವರು ।
ಉತ್ತಮರಿಗೀ ಸೋಮಪಾನವ
ನಿತ್ತು ಮನ್ನಿಪೆನೆನುತೆ ನಾಂ ವಾ-
ಗ್ದತ್ತವನು[7] ಮಾಡಿರ್ಪೆನದರಿಂ ತೊಡಗಿಸಿದೆ ಮಖವ ॥ ೩ ॥

1 ನಿರ್ದೋಷ್ಯನು. 2 ಯಾಗಮಂಟಪ. 3 ಯಜ್ಞಕ್ಕೆ. 4 ಯಜ್ಞವು. 5 ಅವರನ್ನು. 6 ಸಮಾನರೆನ್ನಿಸಿ. 7 ವಾಗ್ದಾನ.

ಇವರು ಸೂರ್ಯನ ಧರ್ಮಸತಿ ಸಂ-
ಭವರು, ಸಂಕರರಲ್ಲ,[1] ಕುಲದಲಿ
ಸವನೆನಿಸಿ[2] ಚಮಸವನುಕುಡುವುದು ವಿಹಿತಮೆನಿಸುವುದು |
ವಿವರಿಸಿಹೆನಿದ ಮುನ್ನನಾಂ ಕುಡಿ-
ಸುವೆನೆನುತ. ತಪ್ಪಿಸೆನು, ಜಿಷ್ಣುವೆ![3]
ಭವಣೆಗೊಳ್ಳದಿರೆಂದು ನುಡಿದನು ಚ್ಯವನನಿಂದ್ರಂಗೆ || ೪ ||

ಕೇಳು, ಮುನಿಪತಿ, ವೈದ್ಯರಿಗೆ ದು-
ಶ್ಶೀಲರಿಗೆ ಗಾಯಕರು ವೊದಲಹ
ಕೀಳು ಜನರಿಗೆ ಸೋಮಪಾನವು ಯೋಗ್ಯಮಲ್ತೆಂದು |
ಪೇಳುತಿಂದ್ರನು ಚಮಸವನು ತಾಂ
ಕೀಳಲೈತರೆ ಮುಳಿದು ಚ್ಯವನನು
ಪೇಳಿದನು ದುಷ್ಕೃತ್ಯದಿಂದಿದು ಪೊಲ್ಲದೆಂದೆನುತ || ೫ ||

ಮುನಿಪತಿಯ[4] ಶೀಲವನು ಕೆಡಿಸಿದ
ಘನದುರಾತ್ಮನೆ! ಸತ್ಕುಲದಿ ಸಂ-
ಜನಿಸಿ ಸದ್ವೃತ್ತಿಯಲಿ ವರ್ತಿಪರಶ್ವಿನೀಸುತರು |
ಅನಯ[5]ವಿಲ್ಲಿವರಲ್ಲಿ ಪಾದರ[6]
ತನದೆ ಹೀನವುದಲ್ಲ ವೈದ್ಯವು
ಜನರ ಬದುಕಿಪರರ್ಹರಲ್ಲದೆ ಸಲುವರೇ ಪೆರರು? || ೬ ||

ಎಂದು ಚಮಸವ[7] ಕುಡಿಸಲಾ ಸಂ-
ಕ್ರಂದನನು[8] ಕನಲುತ್ತ ಮುನಿಪನ
ಕೊಂದುತಹುದೆಂದೆನುತ ವಜ್ರಾಯುಧವ ಕಳುಹಿದನು |

---

1 ಬೆರಕೆಜಾತಿಯುವರು. 2 ಸಮಾನರೆನ್ನಿಸಿ. 3 ಇಂದ್ರನೆ. 4 ಗೌತಮ ಮುನಿಯ.
5 ದುರ್ನೀತಿ. 6 ವ್ಯಭಿಚಾರ. 7 ಪಾನಪಾತ್ರೆ. 8 ಇಂದ್ರ.

ನಿಂದು ಹೂಂಕರಿಸುತ್ತಲಿದಿರಿಸೆ,
ಮುಂದುವರಿಯದೆ ನಿಂದುದಲ್ಲಿ ವ-
ಸುಂಧರೆಗೆ[1] ಬೀಳದೆಯೆ ನಿಂದ ತ್ರಿಶಂಕುವಿನ ತೆರದಿ ‖ ೭ ‖

ಆಗಲಾ ಮುನಿಯಿಂದ್ರನಿಗ್ರಹ-[2]
ಕಾಗಿ ಹೋಮದ ಗೆಯ್ಯಲಗ್ನಿಯೊ-
ಳಾಗ ಸಂಜನಿಸಿದನು ಮದನೆಂದೆನಿಪ ರಕ್ಕಸನು ।
ಬಾಗಿರುವ ಗಿರಿಯಂತೆ ಯುನ್ನತ-
ನಾಗಿ ಬಳೆದಿಹ ನೀಲವರ್ಣದಿ
ಭೋಗಿಯಂದದೊಳಿರ್ಪ[3] ನಾಲಗೆನೀಡುತಾಕ್ಷಣದಿ ‖ ೮ ‖

ಪೇಳಲೇನಾ ಮೂರ್ತಿಯಂದವ,
ತೋಳ್ಗಳಿರ್ಪುವು ಯೋಜನಾಯುತ
ದೋಳಿಯಲಿ ದಂಷ್ಟ್ರಂಗಳಿರ್ಪುವು[4] ನೂರುಯೋಜನದ ।
ನೀಳಧಲಿ ಗಗನದೊಳಗೊಂದಾ-
ಕಾಲು ಭೂಮಿಯೊಳೊಂದು ಕಾಲಿರೆ
ತಾಳಲರಿಯದೆ ಬೆಚ್ಚಿಬಿರ್ದರು ದೇವತೆಗಳಾಗ ‖ ೯ ‖

ನೆಕ್ಕುತಲಿ ನಾಲಗೆಯ, ಕಣ್ಗಳೊ-
ಳೊಕ್ಕ[5] ಕೆಂಡವ ಕಾರುತಲಿ, ನೆರೆ-
ಸಿಕ್ಕಿದವರನು ಸೀಳಿ ಕೆಡಹುತ, ಮೊಸೆದಿರುಹುತ್ತ ।
ರಕ್ಕಸನು ಮುನಿಪತಿಗೆ ವಂದಿಸಿ,
ತಕ್ಕಕಾರ್ಯವ ಬೆಸಸು ತನಗೆನು
ತಕ್ಕರೊಳು ಬೇಡುತಲಿ ನಿಂದಿರ್ದನು ನಿರೀಕ್ಷಿಸುತ ‖ ೧೦ ‖

ಓಡಿಹೋದರು ಕೆಲರು, ದೈತ್ಯನ

---

1 ಭೂಮಿಗೆ. 2 ಇಂದ್ರನನ್ನು ಕೊಲ್ಲುವುದು. 3 ಸರ್ಪ. 4 ಹಲ್ಲು. 5 ಸುರಿಯುವ.

ನೋಡಿ ಜಂಗುಳಿ[1]ಪೋದರರೆಂಬರು,
ನೀಡಿ ಕೈಗಳ ಮುಗಿದು ನಿಂದರು ಮುನಿಪತಿಗೆ, ಬೇಗ |
ಬಾಡಿ ಸಂಕ್ರಂದನನು ಭೂತವ,
ನೋಡಲಾರದೆ ಮುಂದುತೋರದೆ,
ಕೂಡೆ ಧಿ[2]ಷಣನ ನೆನೆದನಾಗಳೆ ಬಂದನಮರಗುರು. ‖ ೧೧ ‖

ಕಂಡು ಸುರಪತಿಯಿರವನೆಲೆ! ಆ-
ಖಂ[3]ಡಲನೆ ಬಿಡು, ವೈರವಿವನೊಳು
ಖಂ[4]ಡಪರಶುವು ಬಂದೊಡಂ ನಿಲಲರಿಯನಿದರಿದಿರು. |
ಚಂಡಮುನಿಯ ತಪಃಪ್ರಭಾವದಿ,
ಕುಂ[5]ಡದೊಳು ಜನಿಸಿರ್ಪನಸುರನು
ಗಂಡುಗಲಿತನ ಸಾಕು, ಮರೆವೊಗು, ಮುನಿಪತಿಯ ಬೇಗ ‖ ೧೨ ‖

ಎನಲು, ವಿನ[6]ಮಿತನಾಗಿ ಸುರಪತಿ
ಮುನಿಪತಿಯ ಮರೆವೊಕ್ಕು ನುಡಿದನು
ಘನಮಹಿಮ! ತಪ್ಪುಗಳ ಮನ್ನಿಸಿ ಕಾಯಬೇಕೆನ್ನ |
ಇನನ ತನುಸಂ[7]ಭವರಿಗಿತ್ತಿಹೆ !
ಸನುಮತದ ಭಾಗವನು ಯಾಗದೊ-
ಳನಘ! ನಿಮ್ಮಯ ತೇಜಕಿದಿರಹರಾರು ಮೂಜಗದಿ? ‖ ೧೩ ‖

ಸಲಹು ಸಲಹೈ ! ಚ್ಯವನ ಮುನಿಪತಿ,
ಕೊಲಿಸಬೇಡೀ ಖಳನ ಕೈಯಿಂ,
ತೊಲಗಿಸೀತನ ನೆನಗೆ ಭಯಮಹುದಿತ್ತಪೆನು ವರವ |
ಇಳೆಯರಸ ಶರ್ಯಾತಿಗಿತ್ತಿಹೆ

---

1 ಜನಗಳಗುಂಪು. 2 ಬೃಹಸ್ಪತಿ. 3 ಇಂದ್ರನೇ. 4 ಈಶ್ವರನ. 5 ಹೋಮಕುಂಡದಲ್ಲಿ.
6 ನಮಸ್ಕರಿಸಿ. 7 ಮಕ್ಕಳು.

ಬಲಯುತನ ಕುವರನನು ಕೃಪೆಯಿಂ
ಸಲಹೆನುತ ಚರಣದಲಿ ಮಣಿದನು ಮತ್ತೆವಾಸವನು ॥ ೧೪ ॥
ಶಾಂತನಾದನು ಮುನಿಪನಿಂದ್ರನ
ಸಾಂತ್ವ[1]ವಚನಗಳಿಂದ ವಿಮಲ
ಸ್ವಾಂತ[2]ದಲಿ ಭೀತಿಯನು ಬಿಡಿಸಿದನಾ ಮದಾಸುರನ।
ಸಂತವಿಸಿ, ನೀನಿಹುದು ವರಸೀ-
ಮಂತಿನಿ[3]ಯರೊಳು, ಮದ್ಯದೊಳು, ನೆರೆ
ಪಂತದಾ ಜೂಜಿನೊಳು, ಬೇಂಟೆಯೊಳೆಂದು ನೇಮಿಸಿದ. ॥ ೧೫ ॥
ಕುಡಿಸಿ ಸೋಮವ ನಾಶ್ವಿನೇಯರಿ-
ಗೊಡಬಡಿಸಿ ವಾಸವನ, ಯಾಗಕೆ
ಕಡೆಯೆನಿಸುವವಭೃತ[4]ವನಾಗಿಸಿ, ವಿಪ್ರರನು ತಣಿಸಿ,[5]।
ಪೊಡವಿಯೊಡೆಯಗನಂತವಸ್ತುವ-
ನುಡುಗೊರೆಗಳನು ಕೊಡಿಸಿ ತೆರಳದ-
ನಡವಿಗಾಮುನಿ ಸತಿಯನೊಡಗೊಂಡಧಿಕ ಹರುಷದಲಿ ॥ ೧೬ ॥
ಪತಿಯ ಸೇವಿಸಿ ಬನದೊಳಿಹ ಮುನಿ
ಸತಿಯರೊಳು ಗುಣವಂತೆ ಇವಳೆಂ-
ದತಿಶಯದ ಕೀರ್ತಿಯನು ಪಡೆದು ಸುಕನ್ಯೆ ಸುಖದಿಂದ।
ವಿತತವಿಭವದೊಳಿರ್ದಳಾ ಮುನಿ-
ಪತಿಯು ತನ್ನಯ ತಪದಿ ನೆರೆಯು-
ನ್ನತಿಯ ಪಡೆದಿರುತಿರ್ದನಿನಿಯಳಗೂಡಿ ಮುದದಿಂದ ॥ ೧೭ ॥
ಇತ್ತಲಾ ಶರ್ಯಾತಿ ತಾಂ ಸಲ-
ಹುತ್ತೆ ಜನವನು ಮುನ್ನಮಾಳ್ದ ನೃ-
ಪೋತ್ತಮರ ಮರೆಸಿದನು ತನ್ನಯ ಕೀರ್ತಿಯಿಂ ಜಗದಿ।

---

1 ಸಮಾಧಾನವಾದ ಮಾತುಗಳಿಂದ. 2 ಮನಸ್ಸಿನಲ್ಲಿ. 3 ಸ್ತ್ರೀಯರಲ್ಲಿ.
4 ದೀಕ್ಷಾಂತ ಸ್ನಾನ. 5 ತೃಪ್ತಿಪಡಿಸಿ.

ಮತ್ತನಾಗಿರೆ ನೃಪತಿ ದುರುಳರ
ಪೊತ್ತಮುರೆ ಪೆರ್ಚುವುದು, ದುರ್ಗತಿ[1]
ತೆತ್ತಿಹುದು, ರವಿವಂಶಜಾತರು ಮೆಚ್ಚರಿದನೆಂದುಂ ॥ ೧೮ ॥

ಒಡನೆ ಗರ್ಭವ ತಳೆದು ಮಹಿಷಿಯು[2]
ಪಡೆದಳಣುಗನ ಶುಭಮುಹೂರ್ತದಿ,
ಕಡುಹರುಷದಿಂ ಪೆಸರಿಸಿದರಾನರ್ತ ನಿವನೆನುತ ।
ಪೊಡವಿಯಲಿ ಪ್ರಜೆಯೆಲ್ಲ ಸಂತಸ-
ಗಡಲೊಳೋಲಾಡಿದರು ತಮ್ಮನು
ಪಡಗರದಿ ಪೊರೆವರಸನುದಿಸಿದನೆಂದು ಪೊಗಳುತ್ತ ॥ ೧೯ ॥

ಮುದದಿ ನಿದನೋದುವರ ನಾಲಿಪ
ಸದಯಹೃದಯರ ಸಲಹುವನು ಶ್ರೀ-
ಪದುಮನಾಭನೆನುತ್ತ[3] ಧರ್ಮಜಗೊರೆದನಾ ಮುನಿಪ ।
ಪದುಳದಿಂದಿಹುದರಿಪೆ[4] ಲೋಕದಿ,
ಹದಿಬದೆಯ[5] ಚರಿತೆಯನು ಪಠಿಪರು
ಬೆದರಿಪೋಪುದು ದುರಿತವಿದರೊಳಗಿಲ್ಲ ಸಂಶಯವು ॥ ೨೦ ॥

ಆ ಮಹೀಸುರದೇಶವಾಳ್ದರು,
ಸೋಮವಂಶದ ರಾಜರವರೊಳು
ಚಾಮಭೂಮಿಪನಧಿಕಯಶದಿಂ ಪೊರೆದನವನಿಯನು ।
ಆ ಮಹೀಶನ ರಮಣಿ, ಸದ್ಗುಣ-
ಧಾಮೆ,[6] ಯಾ ವಾಣೀವಿಲಾಸ ಸು-
ನಾಮೆಯಾಳುತ್ತಿಹಳು[7] ಧರ್ಮದಿ ತಾಯವೋಲ್ ಪ್ರಜೆಯಂ ॥ ೨೧ ॥

---

1 ನರಕ. 2 ರಾಜಪತ್ನಿ. 3 ವಿಷ್ಣು. 4 ಕ್ಷೇಮ. 5 ಪತಿವ್ರತೆ (ತ್ಭ). 6 ಮನೆ
7 ಪ್ರಖ್ಯಾತವಾದ ಹೆಸರುಳ್ಳವಳು.

ಕ್ಷಿತಿಜೆವೊಲ್[1] ಪೂತೆ, ಯಾ ಭಾ-
ರತಿಯವೊಲು ವಿಖ್ಯಾತೆ, ಗುಣಸಂ-
ತತಿಗಳೊಳು ಸುವಿನೀತೆ, ಸಹನದೊಳಾ ಮಹೀಮಾತೇ |
ಪತಿಯ ತರುವಾಯದಲಿ ಬಾಲ್ಯದ-
ಸುತನ ಪ್ರತಿನಿಧಿಯೆನಿಸಿ ಜನವನು
ಹಿತದಿ ನಾಳುತ್ತಿಹಳು ದಯೆಯಿಂ ಧರ್ಮವನು ಬಿಡದೆ ‖ ೨೨ ‖

ಈಕೆಯಾಳ್ಕೆಯೊಳೆಲ್ಲರುಂ ಸುವಿ-
ವೇಕಮಂ ಪಡೆವವೊಲು ಬೋಧಿಪ-
ರೈಕಮುತ್ಯದಿ ವಿದ್ಯೆಯಂ ಮುದದಿಂದ ಸಕಲರ್ಗೆ |
ಲೋಕರಂಜನಮಪ್ಪ ತೆರದಿ ವಿ-
ವೇಕವನು ನೀತಿಯನು ಬೋಧಿಸು-
ವಾಕೃತಿಗಳೆಸಗುತ್ತಲಿರ್ಪರು[2] ಕವಿಗಳತಿಶಯದಿ ‖ ೨೩ ‖

ರಾಮಚರಣದ್ವಂದ್ವ ಸೇವಕ
ರಾಮನಾಮಾಂಕಿತನು ರಚಿಸಿದ-
ನೀ ಮಹಿಮೆಯೊಳುತ್ತಮ ಪತಿವ್ರತೆಯೆನಿಪ ಮುನಿಸತಿಯ |
ರಾಮಣೀಯಕ ಚರಿತವನು ಸು-
ಪ್ರೇಮದಲಿ ಪೆಣ್ಮಕ್ಕಳೋದಲು,
ಸೌಮನಸ್ಯದಿನಿಹರು ದೋಷವನೂಂಕಿ ವರ್ತಿಪರು ‖ ೨೪ ‖

ಮಂಗಳವು ಸಿರಿಯೆರೆಯ[3] ಮಾಗುಡಿ
ರಂಗನಿಗೆ, ಚಕ್ರೇಶನಿಗೆ,[4] ಮೇಣ್
ಮಂಗಳವು ವಾಣೀವಿಲಾಸಸುರಾಜ್ಞಗನವರತ |

---

1 ಪರಿಶುದ್ಧಳು. 2 ಕಾವ್ಯಗಳನ್ನು. 3 ಲಕ್ಷ್ಮೀಯಪತಿ. 4 ಚಕ್ರವರ್ತಿ.

ಮಂಗಳವು ಕೃಷ್ಣೇಂದ್ರಭೂಪಗೆ
ಮಂಗಳವು ಸಜ್ಜನರ ನಿಕರಕೆ[1]
ಮಂಗಳವು ಗೋದ್ವಿಜರಸಮುದಯಕಕ್ಕೆ ಲೋಕದೊಳು ॥ ೨೫ ॥

ಸಂಪೂರ್ಣ.



Printed by P. N. Prabhu, at the Prabhakara Press, Udipi.

1927.

---

1 ಸಮೂಹಕ್ಕೆ.

ಬೆಲೆ ಕಡಿಮೆ! ತ್ವರೆ ಮಾಡಿರಿ!!

## ಇಂಗ್ಲಿಷ್ ಮತ್ತು ಕನ್ನಡ

ವಿವಿಧ ಪಾಠಪುಸ್ತಕಗಳು, ಉಪಪಠ್ಯ ಪುಸ್ತಕಗಳು, ಚರಿತ್ರೆ ಮತ್ತು ಕಥೆಗಳು, ಗಣಿತ ಪುಸ್ತಕಗಳು, ಭೂಗೋಲ ಶಾಸ್ತ್ರ, ಪದ್ಯಪಾಠಗಳು, ವ್ಯಾಕರಣ, ನಿಘಂಟು (Dictionery), ಡ್ರಾಯಿಂಗ ಪುಸ್ತಕಗಳು, ಮೇಪ್ ಡ್ರಾಯಿಂಗ ಪುಸ್ತಕಗಳು, ಎಕ್ಸರ ಸ್ಯಾಜ ಪುಸ್ತಕಗಳು, ಕಂಪಾಸ ಪೆಟ್ಟಿಗೆಗಳು, ಫೌಂಟನ ಪೇನುಗಳು, ಸ್ಟೋನ ಇಂಕ್, ತರತರದ ಕಾಗದ, ಸ್ಲೇಟು, ಕಡ್ಡಿ, ಪೆನ್ಸಿಲು, ಮೊನೆ ಇತ್ಯಾದಿ, ಇತ್ಯಾದಿ. ಶಾಲೋಪಯೋಗದ ಎಲ್ಲಾ ಸಾಮಾನುಗಳು.

ನೀವು ಸಾಮಾನುಗಳನ್ನು ಕೊಂಡುಕೊಳ್ಳುವುದಕ್ಕಿಂತ ಮುಂಚೆ ನಮ್ಮಲ್ಲಿಯ ಕ್ರಯವನ್ನು ತಿಳಿದುಕೊಳ್ಳಿರಿ!

ಪೈ ಬ್ರದರ್ಸ್,
ಆಸ್ಪತ್ರೆಯ ಹತ್ತಿರ, ಉಡುಪಿ.

...ಕರ ಕರ್ನಾಟಕ ಪುಸ್ತಕ ಭಂಡಾರ
...ಶಕರೂ, ಪುಸ್ತಕ ವ್ಯಾಪಾರಿಗಳು
...ಳಮಟ್ಟ, ಧಾರವಾಡ